# ಭಾರತರತ್ನ ವಿಶ್ವೇಶ್ವರಯ್ಯ

ಎ. ಎಸ್. ನಾರಾಯಣರಾವ್

ಸಂಕ್ಷಿಪ್ತ ರೂಪ
ಲಿಂಗದೇವರು ಹಳೆಮನೆ




ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ISBN 81-237-2274-5

ಮೊದಲ ಮುದ್ರಣ : 1998 (*ಶಕ 1919*)
ಎರಡನೆಯ ಮುದ್ರಣ : 2001 (*ಶಕ 1922*)

**ರೂ. 12.00**

Bharatharathna Visveswarayya *(Kannada-abridged edition of the original title Mokshagundam Visveswarayya)*

ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸದೆಹಲಿ - 110 016 ಇವರಿಂದ ಪ್ರಕಟಿತ.

# ಪರಿವಿಡಿ

# 1. ಹುಟ್ಟು, ಯೌವನ

ಮೋಕ್ಷಗುಂಡಂ ವಿಶ್ವೇಶ್ವರಯ್ಯನವರು 1860ರ ಆಗಸ್ಟ್ 27ರಂದು ಹುಟ್ಟಿದರು. ಆಗಿನ ಮೈಸೂರು ಸಂಸ್ಥಾನದ ಕೋಲಾರ ಜಿಲ್ಲೆಯ ಚಿಕ್ಕಬಳ್ಳಾಪುರ ತಾಲ್ಲೂಕಿನ ಮುದ್ದೇನಹಳ್ಳಿ ಅವರು ಹುಟ್ಟಿದ ಸ್ಥಳ. ತಂದೆ ಶ್ರೀನಿವಾಸ ಶಾಸ್ತ್ರಿ. ತಾಯಿ ವೆಂಕಟಲಕ್ಷ್ಮಮ್ಮ.

ಮೋಕ್ಷಗುಂಡಂ ಎಂಬುದು ಆಂಧ್ರದ ಕರ್ನೂಲು ಜಿಲ್ಲೆಯ ಸಿದ್ದಲೂರು ಗ್ರಾಮಕ್ಕೆ ಸೇರಿದ ಒಂದು ಅಗ್ರಹಾರ. ವಿಶ್ವೇಶ್ವರಯ್ಯನವರ ವಂಶದವರು ತಮಗೆ ದಾನವಾಗಿ ಬಂದ ಈ ಅಗ್ರಹಾರದಲ್ಲಿ ವಾಸಿಸುತ್ತಿದ್ದರು. ಆದ್ದರಿಂದ ಈ ಕುಟುಂಬಕ್ಕೆ ಮೋಕ್ಷಗುಂಡಂ ಎಂಬ ಹೆಸರು ಸೇರಿಕೊಂಡಿತು. ವಿಶ್ವೇಶ್ವರಯ್ಯನವರ ಹಿರಿಯರು ಹದಿನೆಂಟನೆಯ ಶತಮಾನದಲ್ಲಿ ಮುದ್ದೇನಹಳ್ಳಿಗೆ ವಲಸೆ ಬಂದರು.

ವಿಶ್ವೇಶ್ವರನಿಗೆ 15 ವರ್ಷ ವಯಸ್ಸಾಗಿದ್ದಾಗಲೇ ತಂದೆ ತೀರಿಕೊಂಡರು. ಆಗ ವಿಶ್ವೇಶ್ವರ ಚಿಕ್ಕಬಳ್ಳಾಪುರ ಶಾಲೆಯ ವಿದ್ಯಾರ್ಥಿ. ಲೋಯರ್ ಸೆಕೆಂಡರಿ ಶಿಕ್ಷಣ ಇಲ್ಲಿಯೇ ಮುಗಿಯಿತು. ಮಗನ ಶಿಕ್ಷಣ ಮುಂದುವರಿಸುವುದು ಹೇಗೆ? ಈ ಚಿಂತೆ ತಾಯಿಗೆ. ತಾಯಿಯ ಸೋದರ ಎಚ್. ರಾಮಯ್ಯನವರು ಬೆಂಗಳೂರಿನಲ್ಲಿ ಇದ್ದರು. ಅವರಿಗೆ ವಿಷಯ ತಿಳಿಯಿತು. ವಿಶ್ವೇಶ್ವರನನ್ನು ಬೆಂಗಳೂರಿಗೆ ಬರಮಾಡಿಕೊಂಡರು. 1875ರಲ್ಲಿ ವೆಸ್ಲಿಯನ್ ಮಿಷನ್ ಪ್ರೌಢಶಾಲೆಗೆ ಸೇರಿಸಿದರು.

ವಿಶ್ವೇಶ್ವರನಿಗೆ ಗುರುಗಳಲ್ಲಿ ಭಯಭಕ್ತಿ, ಪೂಜ್ಯಭಾವನೆ ಇತ್ತು. ಗುರುಗಳಿಗೂ ತಮ್ಮ ಶಿಷ್ಯನಲ್ಲಿ ತುಂಬಾ ಪ್ರೀತಿ. ತಮ್ಮ ಶಿಷ್ಯ ತುಂಬಾ ಬುದ್ಧಿವಂತ ಎಂದು ಎಲ್ಲರಲ್ಲೂ ಹೇಳಿ ಹೊಗಳುತ್ತಿದ್ದರು. ಹೀಗೆ ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದ ಉಪಾಧ್ಯಾಯರಲ್ಲಿ ಕೃಷ್ಣಗಿರಿ ರಾಘವೇಂದ್ರರಾಯರೂ ಒಬ್ಬರು.

ಉಪಾಧ್ಯಾಯರ ಸಂಬಳ ಕಡಿಮೆ. ಈ ಸಂಬಳದಿಂದ ರಾಘವೇಂದ್ರ ರಾಯರಿಗೆ ಸಂಸಾರ ಮಾಡುವುದು ಸಾಧ್ಯವಿರಲಿಲ್ಲ. ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಬೆಂಗಳೂರಿಗೆ ಬಂದರು. ವಕೀಲರಾದರು. ಚಿಕ್ಕಪೇಟೆಯಲ್ಲಿ ಕಛೇರಿ. ಎಂದಿನಂತೆ ಒಂದು ದಿನ ಜನಭರಿತ ಚಿಕ್ಕಪೇಟೆಯಲ್ಲಿ ನಡೆದು ಬರುತ್ತಿದ್ದರು. ಇದ್ದಕ್ಕಿದ್ದಂತೆಯೇ ಎರಡು ಕುದುರೆ ಕಟ್ಟಿದ್ದ ಸಾರೋಟು ಇವರ ಬಳಿ ಬಂದು ನಿಂತಿತು. ಅಚ್ಚುಕಟ್ಟಾದ ವಿದೇಶಿ ಉಡುಪು, ಮೈಸೂರು ಜರಿಪೇಟ ಧರಿಸಿದ್ದ ಒಬ್ಬ ವ್ಯಕ್ತಿ ಸಾರೋಟಿನಿಂದ ಇಳಿದ; ತೆಳ್ಳನೆಯ ಮೈ, ಹೊಳೆಯುವ ಕಣ್ಣುಗಳನ್ನು ಹೊಂದಿರುವ ತೀಕ್ಷ್ಣ ದೃಷ್ಟಿ. ಇವನ್ಯಾರು ಮಹಾನುಭಾವ ಎಂದು ಚಕಿತರಾದರು ರಾಘವೇಂದ್ರ ರಾಯರು. ಆತ ಸಮೀಪಕ್ಕೆ ಬಂದು ವಿನಯದಿಂದ ಕೈಜೋಡಿಸಿ ನಮಸ್ಕರಿಸಿದ.

"ಮೇಷ್ಟ್ರೆ, ನೀವು ನನ್ನನ್ನು ಮರೆತಂತಿದೆ. ಚಿಕ್ಕಬಳ್ಳಾಪುರದ ಶಾಲೆಯಲ್ಲಿ ಓದುತ್ತಿದ್ದ ನಿಮ್ಮ ಶಿಷ್ಯ ವಿಶ್ವೇಶ್ವರನೇ ನಾನು" ಎಂದ. ರಾಘವೇಂದ್ರ ರಾಯರಿಗೆ ಆದ ಆನಂದ ಹೇಳತೀರದು. ಆಗ ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ಮುಖ್ಯ ಇಂಜಿನಿಯರ್ ಆಗಿದ್ದರು. ತನ್ನ ಶಿಷ್ಯ ಇಂಥ ದೊಡ್ಡ ಪದವಿಗೆ ಏರಿದನಲ್ಲಾ ಎಂಬ ಸಂತೋಷ ಅವರಿಗೆ. ಇನ್ನೂ ದೊಡ್ಡ ಸ್ಥಾನ ದೊರೆಯಲಿ, ಚಿರಂಜೀವಿಯಾಗಿ ಬಾಳು ಎಂದು ಹರಸಿದರು.

ಹೈಸ್ಕೂಲು ಶಿಕ್ಷಣ ಮುಗಿಸಿದ ವಿಶ್ವೇಶ್ವರ ಸೆಂಟ್ರಲ್ ಕಾಲೇಜ್ ಸೇರಿದ. ಶಿಕ್ಷಣ ಮುಂದುವರೆಸಲು ಹಣ ಬೇಕಲ್ಲ? ರಾಮಯ್ಯನವರ ಮನೆಯಲ್ಲಿ ಊಟ. ಪುಸ್ತಕ ಮತ್ತು ಇತರ ಖರ್ಚಿಗೆ ಹಣದ ಕೊರತೆ. ಅದಕ್ಕಾಗಿ ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡಲು ಪ್ರಾರಂಭಿಸಿದ. ಮಹಾರಾಜರ ಮಂತ್ರಿಗಳಾಗಿದ್ದ ಮುದ್ದಯ್ಯನವರ ಮಕ್ಕಳಿಗೆ ಪಾಠ ಹೇಳಿಕೊಡುತ್ತಿದ್ದ. ರಾಮಯ್ಯನವರ ಮನೆ ಚಾಮರಾಜ ಪೇಟೆಯಲ್ಲಿ. ಮುದ್ದಯ್ಯನವರ ಬಂಗಲೆ ಕೋಟೆಯಲ್ಲಿ. ಹೀಗೆ ಒಂದು ಮೈಲಿಯ ಅಂತರ. ಬೆಳಿಗ್ಗೆ ಚಾಮರಾಜಪೇಟೆಯಿಂದ ಕೋಟೆಗೆ

ಹೋಗಬೇಕು. ಪಾಠ ಹೇಳಿ ಊಟಕ್ಕೆ ರಾಮಯ್ಯನವರ ಮನೆಗೆ ಬರಬೇಕು. ಊಟ ಮುಗಿಸಿ ಸೆಂಟ್ರಲ್ ಕಾಲೇಜಿಗೆ ಓಡಬೇಕು. ಅಂತೂ ದಿನಕ್ಕೆ ಹತ್ತು ಮೈಲಿಗೆ ಕಡಿಮೆ ಇಲ್ಲದ ನಡೆ.

ವಿಶ್ವೇಶ್ವರಯ್ಯನಿಗೆ ಬಡತನ ಕಷ್ಟ ಸಹಿಸುವುದನ್ನು ಕಲಿಸಿತು. ಮೆಟ್ರಿಕ್ ಪರೀಕ್ಷೆಗೆ ಕೂಡುವ ಸಮಯದಲ್ಲಿ ಅವನಿಗೆ ಹದಿನಾರನೆಯ ವಯಸ್ಸು. ಪರೀಕ್ಷೆಗೆ ಕಟ್ಟಲು ಹಣ ಇರಲಿಲ್ಲ. ತಾಯಿ ಚಿಕ್ಕಬಳ್ಳಾಪುರದಲ್ಲಿ ಇದ್ದಳು. ಆಗಿನ ಕಾಲಕ್ಕೆ ಅಲ್ಲಿಗೆ ಬಸ್ ಅನುಕೂಲ ಇರಲಿಲ್ಲ. ನಡೆಯುತ್ತಲೇ 35 ಮೈಲಿ ದೂರದ ಚಿಕ್ಕಬಳ್ಳಾಪುರಕ್ಕೆ ಹೊರಟ. ತಾಯಿಗೆ ಹಣ ಎಲ್ಲಿಂದ ಬರಬೇಕು ? ಮನೆಯಲ್ಲಿದ್ದ ಪಾತ್ರೆ ಅಡವಿಟ್ಟು ಮಗನಿಗೆ ಹನ್ನೆರಡು ರೂಪಾಯಿ ಕೊಟ್ಟಳು. ಮಗ ರಾತ್ರಿ ಮಲಗಿದ. ಬೆಳಗ್ಗೆ ಎದ್ದು ನಡೆಯುತ್ತಲೇ ಬೆಂಗಳೂರಿಗೆ ಹೊರಟ . ಸಮಯಕ್ಕೆ ಸರಿಯಾಗಿ ಕಾಲೇಜಿಗೆ ಬರಲಾಗಲಿಲ್ಲ. ಗುಮಾಸ್ತ ಹಣ ತೆಗೆದುಕೊಳ್ಳಲು ನಿರಾಕರಿಸಿದ. ಕಡೆಗೆ ಒಬ್ಬ ಅಧಿಕಾರಿಯ ಶಿಫಾರಸ್ಸಿನಿಂದ ಹಣ ತೆಗೆದುಕೊಂಡನು. ವಿಶ್ವೇಶ್ವರಯ್ಯ ಆ ವರ್ಷ ಇಡೀ ಸಂಸ್ಥಾನಕ್ಕೆ ಮೊದಲ ದರ್ಜೆಯಲ್ಲಿ ಉತ್ತೀರ್ಣನಾದ.

ವಿಶ್ವೇಶ್ವರಯ್ಯ ಸ್ವತಃ ಶಿಸ್ತಿನ ಸಿಪಾಯಿ. ಬೇರೆಯವರಲ್ಲೂ ಇದೇ ಶಿಸ್ತನ್ನು ನಿರೀಕ್ಷಿಸುವವನು. ಮಂತ್ರಿಯ ಮಗನಾದರೇನು? ಅಶಿಸ್ತಿಗಾಗಿ, ಸೋಮಾರಿತನಕ್ಕಾಗಿ ಶಿಷ್ಯರನ್ನು ಶಿಕ್ಷಿಸಲು ಹಿಂಜರಿಯುತ್ತಿರಲಿಲ್ಲ.

ಕಷ್ಟಪಟ್ಟು ಶಿಕ್ಷಣ ಮುಂದುವರಿಸಿದ ವಿಶ್ವೇಶ್ವರಯ್ಯ ಪ್ರತಿಯೊಂದು ತರಗತಿಯಲ್ಲೂ ಉನ್ನತ ದರ್ಜೆಯಲ್ಲಿ ಪಾಸಾಗುತ್ತಿದ್ದ. ಅವನಿಗೆ ವಿದ್ಯಾರ್ಥಿವೇತನ ಸಿಕ್ಕಿತು. ಆಗ ಚಾರ್ಲ್ಸ್ ವಾಟರ್ಸ್ ಎಂಬ ಆಂಗ್ಲ ವ್ಯಕ್ತಿ ಸೆಂಟ್ರಲ್ ಕಾಲೇಜಿನ ಮುಖ್ಯ ಪ್ರಾಧ್ಯಾಪಕರಾಗಿದ್ದರು. ಅವರು ವಿಶ್ವೇಶ್ವರಯ್ಯನ ಒಳ್ಳೆಯ ನಡತೆ ಮತ್ತು ಬುದ್ಧಿವಂತಿಕೆಯನ್ನು ಮೆಚ್ಚಿ ಕೊಂಡಿದ್ದರು. ಅದಕ್ಕಾಗಿ ಅವರು ವೆಬ್‌ಸ್ಟರ್ ಇಂಗ್ಲಿಷ್ ನಿಘಂಟನ್ನು ಅವನಿಗೆ ಬಹುಮಾನವಾಗಿ ಕೊಟ್ಟರು. ಅಂದಿನಿಂದ ಪ್ರತಿ ಹೊಸ ಮುದ್ರಣದ ಈ ನಿಘಂಟನ್ನು ಕೊಳ್ಳುವ ಹವ್ಯಾಸ ಅವನಲ್ಲಿ ಬೆಳೆಯಿತು.

1881ರಲ್ಲಿ ವಿಶ್ವೇಶ್ವರಯ್ಯ ಬಿ.ಎ. ಪರೀಕ್ಷೆಯಲ್ಲಿ ಉನ್ನತ ದರ್ಜೆಯಲ್ಲಿ ಪಾಸಾಗಿ ಪದವೀಧರನಾದ.

ಆಗಿನ ಕಾಲದಲ್ಲಿ ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಮೈಸೂರು ಸಂಸ್ಥಾನದಲ್ಲಿ ಅವಕಾಶ ಇರಲಿಲ್ಲ. ಹೊರಗಿನ ಪ್ರಾಂತಕ್ಕೆ ಹೋಗ ಬೇಕಾಗಿತ್ತು. ಮೈಸೂರು ಸರ್ಕಾರ ತನ್ನ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ವೇತನ ಕೊಡುತ್ತಿತ್ತು. ವಿದ್ಯಾರ್ಥಿವೇತನ ಪಡೆದು ವಿಶ್ವೇಶ್ವರಯ್ಯ ಇಂಜಿನಿಯರಿಂಗ್ ಶಿಕ್ಷಣಕ್ಕಾಗಿ ಪುಣೆಗೆ ಹೋಗಿ ಮೂರು ವರ್ಷಗಳ ಅವಧಿಯ ವ್ಯಾಸಂಗವನ್ನು ಎರಡೂವರೆ ವರ್ಷಗಳಲ್ಲಿಯೇ ಮುಗಿಸಿದ. 1883ರಲ್ಲಿ ಎಲ್.ಸಿ.ಇ. ಮತ್ತು ಇ.ಸಿ.ಇ.ಎಲ್. ಪರೀಕ್ಷೆಗಳಲ್ಲಿ ಅಖಂಡ ಬೊಂಬಾಯಿ ಪ್ರಾಂತದಲ್ಲೇ ಮೊದಲ ದರ್ಜೆಯಲ್ಲಿ ಮೊದಲ ಸ್ಥಾನಗಳಿಸಿದ. ಇದು ಈಗಿನ ಬಿ.ಇ. ಪದವಿಗೆ ಸಮ. ಆಗ ಅವನಿಗೆ 23 ವರ್ಷ ವಯಸ್ಸು. ಉನ್ನತ ದರ್ಜೆಯಲ್ಲಿ ಪಾಸಾದ್ದರಿಂದ ಜೇಮ್ಸ್ ಬರ್ಕ್‌ಲೆ ಬಂಗಾರದ ಪದಕ ಪಡೆದ.

ಬೆಂಗಳೂರು ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್ ಆಗಿದ್ದ ಚಾರ್ಲ್ಸ್ ವಾಟರ್ಸ್ ನಿವೃತ್ತರಾದ ಮೇಲೆ ಲಂಡನ್ನಿಗೆ ವಾಪಸಾದರು. ಹಲವಾರು ಬಾರಿ ಲಂಡನ್ನಿಗೆ ಹೋಗಿದ್ದ ವಿಶ್ವೇಶ್ವರಯ್ಯನವರು ಪ್ರತಿ ಸಾರಿ ಅಲ್ಲಿಗೆ ಹೋದಾಗಲೂ ತಮ್ಮ ಹಳೆಯ ಪ್ರಿನ್ಸಿಪಾಲರನ್ನು ಭೇಟಿಯಾಗುತ್ತಿದ್ದರು. ವಾಟರ್ಸ್ ಅವರಿಗೂ ತಮ್ಮ ಹಳೆಯ ನೆಚ್ಚಿನ ಶಿಷ್ಯನಲ್ಲಿ ತುಂಬಾ ಪ್ರೀತಿ. ಅಂತ್ಯ ಕಾಲದಲ್ಲಿ ತಾನು ಧರಿಸುತ್ತಿದ್ದ ಶರ್ಟಿನ ಬಂಗಾರದ ಗುಂಡಿಗಳನ್ನು ವಿಶ್ವೇಶ್ವರಯ್ಯನಿಗೆ ತನ್ನ ಪ್ರೀತಿಯ ಕಾಣಿಕೆಯಾಗಿ ಕೊಡುವಂತೆ ಹೆಂಡತಿಗೆ ತಿಳಿಸಿದರು. ಪತಿಯ ಮರಣಾನಂತರ ಆಕೆ ಭಾರತಕ್ಕೆ ಬಂದು ತನ್ನ ಪತಿಯ ಆಸೆಯನ್ನು ಈಡೇರಿಸಿದರು. ಎಂಥ ಅಭಿಮಾನ, ಎಂಥ ಆದರ್ಶ!

ವಿಶ್ವೇಶ್ವರಯ್ಯನವರು ತೆಳ್ಳಗೆ, ಬೆಳ್ಳಗೆ ಇದ್ದರು. ಈ ನರಪೇತಲ ಆಸಾಮಿ 30 ವರ್ಷಕ್ಕಿಂತ ಹೆಚ್ಚು ಕಾಲ ಬದುಕಲಾರ ಎಂದು ಕೆಲವರು ಹಾಸ್ಯ ಮಾಡುತ್ತಿದ್ದರು. ಆದರೆ ನೂರು ವರ್ಷಗಳಿಗೂ ಹೆಚ್ಚು ಕಾಲ ಇವರು ಸಾರ್ಥಕ ಜೀವನ ನಡೆಸಿದರು. ಪುಣೆಯಲ್ಲಿ ಓದುತ್ತಿದ್ದಾಗ ಬೇಸಿಗೆ ರಜಾಕ್ಕೆ

ವಿಶ್ವೇಶ್ವರಯ್ಯ ಚಿಕ್ಕಬಳ್ಳಾಪುರಕ್ಕೆ ಬರುತ್ತಿದ್ದರು. ಇಂಥ ಒಂದು ರಜೆಗೆ ಬಂದಾಗ ಅವರ ಮೊದಲ ಮದುವೆ ಆಯಿತು. ತಾಯಿ ಸೊಸೆಗೆ ಸಾವಿತ್ರಿ ಎಂದು ಕರೆದಳು. ತಾಯಿ, ಸೊಸೆ ಪುಣೆಗೆ ಮಗನಲ್ಲಿಗೆ ಹೋದರು. ಆದರೆ ತಾಯಿಗೆ ಪುಣೆಯ ಆಧುನಿಕ ಜೀವನಕ್ಕೆ ಹೊಂದಿಕೊಳ್ಳಲು ಆಗಲಿಲ್ಲ. ತಾಯಿ ಚಿಕ್ಕಬಳ್ಳಾಪುರಕ್ಕೆ ಮರಳಿದರು. ಸಾವಿತ್ರಿ ಗಂಡನ ಜೊತೆ ಉಳಿದಳು. ಅವಳಿಗೆ ಒಂದು ಮಗುವಾಯಿತು. ಆದರೆ ಮಗು ಮತ್ತು ಬಾಣಂತಿ ಇಬ್ಬರೂ ಉಳಿಯಲಿಲ್ಲ. ಆಗ ಈಗಿರುವಂತಹ ಚಿಕಿತ್ಸೆಯ ಸೌಲಭ್ಯಗಳಾವುವೂ ಇರಲಿಲ್ಲ.

ತಾಯಿ ಮಗನಿಗೆ ಮಾರನೆ ವರ್ಷವೇ ಎರಡನೆ ಮದುವೆ ಮಾಡಿಸಿದರು. ಏನು ದುರಾದೃಷ್ಟವೋ ಅವಳು ಹೆರಿಗೆಯ ಕಾಲದಲ್ಲಿ ಮಗು ಹೆತ್ತು ಸತ್ತುಹೋದಳು. ಮಗುವೂ ಉಳಿಯಲಿಲ್ಲ.

ಮಗ ಎಷ್ಟು ಹೇಳಿದರೂ ಕೇಳದೆ ತಾಯಿ ಮೂರನೆ ಮದುವೆಯನ್ನು ಮಾಡಿಸಿದರು. ಸೇಲಂ ಜಿಲ್ಲೆಗೆ ಸೇರಿದ ಕುಪ್ಪ ಗ್ರಾಮದ ಕನ್ಯೆ. ವಿಶ್ವೇಶ್ವರಯ್ಯ ಹೆಂಡತಿಯನ್ನು ಪುಣೆಗೆ ಕರೆದುಕೊಂಡು ಹೋದರು. ಆದರೆ ಆಕೆಯ ನಡತೆಯಲ್ಲಿ ಸಂದೇಹ ಮೂಡಿತು. ಸೋದರಮಾವ ರಾಮಯ್ಯನವರ ಸಲಹೆಯಂತೆ ಹೆಂಡತಿಯನ್ನು ಬಿಟ್ಟುಬಿಟ್ಟರು. ಆಕೆ ಬದುಕಿರುವವರೆಗೂ ಅವರು ಜೀವನಾಂಶ ಕೊಡುತ್ತಿದ್ದರು. ಹೀಗಾಗಿ ವಿಶ್ವೇಶ್ವರಯ್ಯನವರು ಸಂತಾನಹೀನರಾದರು.

1884ರ ಮಾರ್ಚ್‌ನಲ್ಲಿ ವಿಶ್ವೇಶ್ವರಯ್ಯನವರು ಬೊಂಬಾಯಿ ಸರಕಾರದಲ್ಲಿ ಸಹಾಯಕ ಇಂಜಿನಿಯರ್ ಕೆಲಸಕ್ಕೆ ಸೇರಿದರು. ಬೊಂಬಾಯಿ ಸರ್ಕಾರದಲ್ಲಿ ಕೆಲಸಕ್ಕೆ ಸೇರಿಕೊಂಡ ಸ್ವಲ್ಪ ಕಾಲದ ನಂತರ ವಿಶ್ವೇಶ್ವರಯ್ಯನವರು ಮೈಸೂರಿಗೆ ಬಂದರು. ಅವರಿಗೆ ತಮ್ಮ ಮಹಾರಾಜರಿಗೆ ಗೌರವ ಸಲ್ಲಿಸಬೇಕೆಂಬ ಆಸೆ. ದಸರಾ ಗಡಿಬಿಡಿ. ಸಂದರ್ಶನ ಸಿಗಲಿಲ್ಲ. 1887ರಲ್ಲಿ ಮಹಾರಾಜರು ಬೊಂಬಾಯಿಗೆ ಬಂದಿದ್ದರು. ಆಗ ಸಂದರ್ಶನ ಸಿಕ್ಕಿತು. ತನ್ನ ಒಬ್ಬ ಪ್ರಜೆ ಚಿಕ್ಕ ವಯಸ್ಸಿನಲ್ಲೇ ಬೊಂಬಾಯಿ ಸರ್ಕಾರದಲ್ಲಿ 500 ರೂಪಾಯಿಗಳ ಹುದ್ದೆಯಲ್ಲಿ ಇದ್ದುದು

ಮಹಾರಾಜರಿಗೆ ಸಂತಸ ತಂದಿತು. ಪಕ್ಕದಲ್ಲಿ ಕೂರಿಸಿಕೊಂಡು ಕುಶಲ ವಿಚಾರಿಸಿದರು. ವಿಶ್ವೇಶ್ವರಯ್ಯನವರಿಗೂ ತುಂಬಾ ತೃಪ್ತಿ, ಸಂತೋಷ ಆಯಿತು.

## 2. ಸ್ವಯಂ ಚಾಲಿತ ಬಾಗಿಲು

ವಿಶ್ವೇಶ್ವರಯ್ಯನವರ ನೌಕರಿ ಪ್ರಾರಂಭವಾದುದು, ಬೊಂಬಾಯಿ ಪ್ರಾಂತದ ನಾಸಿಕ್ ಜಿಲ್ಲೆಯಲ್ಲಿ. ಸರ್ಕಾರ ಅವರನ್ನು ಅಲ್ಲಿ ಬಹಳ ಕಾಲ ಇರಗೊಡಲಿಲ್ಲ. ಅಲ್ಲಿಂದ ಖಾನ್‌ದೇಶ್ ಜಿಲ್ಲೆಗೆ ವರ್ಗ ಮಾಡಿತು. ಆಗಿನ ಬೊಂಬಾಯಿ ಪ್ರಾಂತ ಬಹಳ ದೊಡ್ಡದಾಗಿತ್ತು. ಗುಜರಾತ್, ಮಹಾರಾಷ್ಟ್ರ ಮತ್ತು ಕರ್ನಾಟಕದ ಕೆಲವು ಭಾಗಗಳನ್ನು ಒಳಗೊಂಡಿತ್ತು. ಖಾನ್‌ದೇಶದ ಧೂಲಿಯಾ ವಿಶ್ವೇಶ್ವರಯ್ಯನವರ ಕೇಂದ್ರ ಕಾರ್ಯಸ್ಥಾನ. ಪಂಜ್ರಾ ನದಿಯಿಂದ ದತಾರಿ ಗ್ರಾಮಕ್ಕೆ 'ಸೈಫನ್' ವಿಧಾನದಿಂದ ನೀರು ಹರಿಸುವ ಕೆಲಸವನ್ನು ಸರ್ಕಾರ ಇವರಿಗೆ ವಹಿಸಿತು.

ಜವಾಬ್ದಾರಿ ದೊಡ್ಡದು. ಕಷ್ಟದ ಕೆಲಸ. ಅನುಭವ ಸಾಲದು. ಕೆಲಸ ಮಾಡುವ ಜಾಗ ಹೊಸದು. ನದಿಯಿಂದ ಆಚೆಯ ದಡಕ್ಕೆ ಸೈಫನ್ ಮೂಲಕ ನೀರು ಸಾಗಿಸಬೇಕು. ಮಧ್ಯೆ ಸಣ್ಣ ಕಲ್ಲುಗುಡ್ಡಗಳು ಬೇರೆ. ಬಂಡೆಗಳನ್ನು ಕೊರೆದು ಸುರಂಗ ಮಾಡಬೇಕು. ಅವುಗಳಲ್ಲಿ ಕೊಳವೆ ಜೋಡಿಸಬೇಕು. ಕೆಲಸ ಪ್ರಾರಂಭಿಸಿದರು. ಕೆಲವೇ ದಿನಗಳಲ್ಲಿ ಮಳೆ ಪ್ರಾರಂಭವಾಯಿತು. ನದಿಯಲ್ಲಿ ಪ್ರವಾಹ. ಮರಳನ್ನು ತೆಗೆಸಿದಷ್ಟೂ ಮತ್ತಷ್ಟು ಮರಳು ಬಂದು ಬೀಳುತ್ತಿತ್ತು. ಮೇಲಿಂದ ಮೇಲೆ ಮರಳು ತೆಗೆಸಬೇಕು. ಶ್ರಮ, ವೆಚ್ಚ ಎರಡೂ ಹೆಚ್ಚುತ್ತಿತ್ತು. ಮೊದಲೇ ಅಂದಾಜು ಮಾಡಿದ ವೆಚ್ಚಕ್ಕಿಂತ ಹೆಚ್ಚು ಖರ್ಚು ಮಾಡುವಂತಿಲ್ಲ. ಆದ್ದರಿಂದ ಮಳೆಗಾಲದ ನಂತರ ಕೆಲಸ ಮುಂದುವರೆಸಲು ಜಿಲ್ಲೆಯ ಎಕ್ಸಿಕ್ಯೂಟಿವ್ ಇಂಜಿನಿಯರ್‌ಗೆ ಕಾಗದ ಬರೆದರು. ಧೂಲಿಯಾಗೆ ಹಿಂತಿರುಗಲು ಅನುಮತಿ ಕೇಳಿದರು.

ಆದರೆ ಅವರಿಗೆ ಧೂಲಿಯಾಗೆ ಹಿಂತಿರುಗಲು ಅನುಮತಿ ದೊರಕಲಿಲ್ಲ. "ಆಜ್ಞಾಪಾಲನೆ, ಕಾರ್ಯನಿರ್ವಹಣೆ ಈ ಬಗೆಗೆ ತೋರುತ್ತಿರುವ ಅನಾದರಣೆ ಒಳ್ಳೆಯದಲ್ಲ. ಪ್ರಾರಂಭದಲ್ಲಿಯೇ ಈ ಧೋರಣೆ ತಾಳಿರುವುದು ಸರಿಯಲ್ಲ" ಎಂಬ ಉತ್ತರ ಬಂತು. ಇದರಿಂದ ವಿಶ್ವೇಶ್ವರಯ್ಯನವರ ಉತ್ಸಾಹ ಜಾಸ್ತಿಯಾಯಿತೇ ವಿನಹ ಕುಗ್ಗಲಿಲ್ಲ. ತೊಂದರೆಗಳು ಏನೇ ಬಂದರೂ ಕೆಲಸ ಮಾಡಿಯೇ ಮುಗಿಸಲು ನಿಶ್ಚಯಿಸಿದರು.

ಸೈಫನ್ ಕೆಲಸದಲ್ಲಿ ತೊಡಗಿದ್ದವರು ಅನುಭವಿಗಳಾಗಿರಲಿಲ್ಲ. ಅಲ್ಲಿ ವಾಸಿಸುತ್ತಿದ್ದವರು ಅನಾಗರಿಕ ಭಿಲ್ಲರು. ಅವರೆಲ್ಲರನ್ನೂ ಕಟ್ಟಿಕೊಂಡು, ಮಳೆಯನ್ನು ಲಕ್ಷಿಸದೆ ಎರಡೇ ತಿಂಗಳಲ್ಲಿ ಕೆಲಸ ಮುಗಿಸಿದರು. ಸೈಫನ್ ವ್ಯವಸ್ಥೆಯ ಕೊಳವೆಯ ಮೂಲಕ ಗ್ರಾಮಕ್ಕೆ ನೀರು ಹರಿಸಿದರು. ಗ್ರಾಮಸ್ಥರು ಸಂತೋಷಪಟ್ಟರು. ತರುಣ ವಿಶ್ವೇಶ್ವರಯ್ಯನವರ ಸಾಹಸ ವನ್ನು ಕೊಂಡಾಡಿದರು. ಮೊದಲು ಆಕ್ಷೇಪ ಎತ್ತಿ ಕಾಗದ ಬರೆದ ಅಧಿಕಾರಿ ಹೊಗಳಿ ಪತ್ರ ಬರೆದರು.

ಸರ್ಕಾರಿ ಉದ್ಯೋಗದಲ್ಲಿ ಮೇಲಿನ ದರ್ಜೆಗೆ ಬರಲು ಮತ್ತು ಬಡ್ತಿ ಪಡೆಯಲು ಇಲಾಖೆಯ ಪರೀಕ್ಷೆಯಲ್ಲಿ ಪಾಸಾಗಬೇಕು. ಅಲ್ಲದೆ ಸ್ಥಳೀಯ ಭಾಷೆಯ ಜ್ಞಾನವೂ ಅಗತ್ಯ. ವಿಶ್ವೇಶ್ವರಯ್ಯನವರು ಮರಾಠಿ ಭಾಷೆಯನ್ನು ಚೆನ್ನಾಗಿ ಕಲಿತರು. ಇಲಾಖಾ ಪರೀಕ್ಷೆ ಬರೆಯಬೇಕು. ಅನುಭವ ಸಾಲದು. ವಿಶ್ವವಿದ್ಯಾಲಯದ ಎಲ್ಲಾ ಪರೀಕ್ಷೆಗಳಲ್ಲೂ ಅತ್ಯುನ್ನತ ದರ್ಜೆಯಲ್ಲಿ ಪಾಸಾಗಿದ್ದ ಇವರಿಗೆ ಈ ಚಿಂತೆ ಕಾಡತೊಡಗಿತು. ಇಂಗ್ಲಿಷ್ ಮೇಲಾಧಿಕಾರಿಗೆ ಇವರ ಸಾಮರ್ಥ್ಯ ಗೊತ್ತಿತ್ತು. ಅವರು ಪರೀಕ್ಷೆಗೆ ಕೂಡುವಂತೆ ಪ್ರೋತ್ಸಾಹಿಸಿದರು. ವಿಶ್ವೇಶ್ವರಯ್ಯನವರು ಉತ್ತಮ ದರ್ಜೆಯಲ್ಲಿ ಪಾಸಾದರು. ಅವರು ಯಾವ ಪರೀಕ್ಷೆಯಲ್ಲೂ ಫೇಲಾದದ್ದೇ ಇಲ್ಲ. ಇದರಿಂದಾಗಿ ಕೆಲಸಕ್ಕೆ ಸೇರಿದ ಕೇವಲ ಇಪ್ಪತ್ತು ತಿಂಗಳಲ್ಲಿ ಮೊದಲ ದರ್ಜೆ ಇಂಜಿನಿಯರ್ ಆದರು.

ಖಾನ್‌ದೇಶ್ ಮಲೇರಿಯಾ ಪೀಡಿತ ಪ್ರದೇಶ. ವಿಶ್ವೇಶ್ವರಯ್ಯ ನವರಿಗೂ ಈ ವ್ಯಾಧಿ ತಗುಲಿತು. ಜ್ವರ ಪೀಡಿತರಾದರು. ಆರೋಗ್ಯ

ಕೆಟ್ಟಿತು. ಬೇರೆ ಕಡೆ ವರ್ಗ ಮಾಡಬೇಕೆಂದು ಕೇಳಿಕೊಂಡರು. ಪುಣೆಗೆ ಇವರನ್ನು ವರ್ಗ ಮಾಡಿದರು. ಅಲ್ಲಿ ಸರ್ಕಾರಿ ಕಟ್ಟಡಗಳು, ರಸ್ತೆ ದುರಸ್ತಿ ಮೇಲ್ವಿಚಾರಣೆ ಇವರ ಕೆಲಸ. ತಮ್ಮ ಸಾಮರ್ಥ್ಯದಿಂದ ಇಲ್ಲಿಯೂ ಉತ್ತಮ ಹೆಸರು ಗಳಿಸಿದರು.

ಉತ್ತಮ ಪ್ರಾಮಾಣಿಕ ಕೆಲಸಗಾರನಿಗೆ ಬೇಡಿಕೆ ಹೆಚ್ಚು. ವಿಶ್ವೇಶ್ವರಯ್ಯನವರಿಗೆ ಬೇರೆ ಪ್ರದೇಶಕ್ಕೆ ಹೋಗಬೇಕೆಂಬ ಆಜ್ಞೆ ಬಂತು. ಸಿಂಧ್ ವಿಭಾಗದ ಸಕ್ಕೂರಿಗೆ ಸಿಂಧೂ ನದಿಯಿಂದ ಕುಡಿಯುವ ನೀರು ಒದಗಿಸಬೇಕಿತ್ತು. ಸಿಂಧ್ ಆಗ ಬೊಂಬಾಯಿ ಪ್ರಾಂತಕ್ಕೆ ಸೇರಿತ್ತು. ಅಲ್ಲಿ ಬಹಳ ಕೆಟ್ಟ ಹವೆ. ಅತಿ ಬಿಸಿಲು, ಅತಿ ಚಳಿ. ಅಲ್ಲಿಗೆ ಒಬ್ಬ ಇಂಗ್ಲಿಷ್ ಇಂಜಿನಿಯರನ್ನು ನೇಮಿಸಿದ್ದರು. ಆತ ಈ ಕೆಟ್ಟ ಹವೆಯಿಂದಾಗಿ ಸತ್ತು ಹೋಗಿದ್ದ. ಆದುದರಿಂದ ಬೇರೆ ಇಂಜಿನಿಯರ್‌ಗಳು ಅಲ್ಲಿಗೆ ಹೋಗಲು ಹೆದರುತ್ತಿದ್ದರು. ವಿಶ್ವೇಶ್ವರಯ್ಯನವರ ಮೇಲಾಧಿಕಾರಿ ರೆನಾಲ್ಡ್ ಎಂಬುವನು ವಿಶ್ವೇಶ್ವರಯ್ಯನವರನ್ನು ಅಲ್ಲಿಗೆ ಹೋಗುವಿರಾ ಎಂದು ಕೇಳಿದ. ಅಲ್ಲದೆ ಅಲ್ಲಿಯ ಕಷ್ಟಗಳನ್ನೂ ವಿವರಿಸಿದ. ಕಡೆಗೆ "ನೀವೇ ಅತ್ಯಂತ ಯೋಗ್ಯರೆಂಬ ವಿಷಯವನ್ನು ನಾನು ಸರ್ಕಾರಕ್ಕೆ ತಿಳಿಸಿದ್ದೇನೆ" ಎಂದೂ ಹೇಳಿದ. ವಿಶ್ವೇಶ್ವರಯ್ಯನವರು ಅಲ್ಲಿಗೆ ಹೋಗಲು ಒಪ್ಪಿಕೊಂಡರು.

ಸಿಂಧೂ ನದಿಯಿಂದ ಸಕ್ಕೂರಿಗೆ ನೀರು ಒದಗಿಸಲು ವಿಶ್ವೇಶ್ವರಯ್ಯನವರು ತಮ್ಮದೇ ಆದ ಒಂದು ಯೋಜನೆಯನ್ನು ಸಿದ್ಧಪಡಿಸಿದರು. ಸಿಂಧೂ ನದಿಯ ನೀರು ತುಂಬ ಬಗ್ಗಡ. ನದಿಯ ತೀರದಲ್ಲಿ ಒಂದು ಬಾವಿ ತೋಡಿಸಿದರು. ನದಿಯ ನೀರು ಮರಳಿನ ಮೂಲಕ ಬಾವಿಯ ಕೆಳಭಾಗಕ್ಕೆ ಇಳಿಯುವಂತೆ ಮಾಡಿದರು. ಮರಳಿನ ಮುಖಾಂತರ ಹೋಗುವಾಗ ಬಗ್ಗಡದ ನೀರು ಜಾಲಾಡಿ ಶುದ್ಧವಾಗುತ್ತದೆ. ಈ ಶುದ್ಧ ನೀರನ್ನು ಗುಡ್ಡದ ಮೇಲಕ್ಕೆ ಪಂಪ್ ಮಾಡಿ ಶೇಖರಿಸುವುದು. ಅನಂತರ ಕೊಳವೆಗಳ ಮೂಲಕ ಸಾಗಿಸುವುದು. ಇದರಿಂದ ಶೋಧಿಸುವ ಬೇರೆ ವ್ಯವಸ್ಥೆಯೂ ಬೇಡವಾಯಿತು. ಪೌರಸಭೆಗೆ ಹಣವೂ ಉಳಿತಾಯವಾಯಿತು. ವಿಶ್ವೇಶ್ವರಯ್ಯನವರ ಬುದ್ಧಿವಂತಿಕೆಯಿಂದ ಸಮಸ್ಯೆ ಸುಲಭವಾಗಿ ಪರಿಹಾರವಾಯಿತು.

ಪುಣೆ ಮತ್ತು ಪುಣೆಯ ಹತ್ತಿರದ ದಂಡಿನ ಕರ್ಕಿಗೆ ಮೂಸಾ ನದಿಯ ಕಾಲುವೆಯಿಂದ ನೀರನ್ನು ಒದಗಿಸಲಾಗುತ್ತಿತ್ತು. ಕಾಲುವೆಯ ನೀರು ಖಡಕವಾಸಲದ ಹತ್ತಿರದ ಜಲಾಶಯಕ್ಕೆ ಹರಿಯುತ್ತದೆ. 'ಫೈಪ್' ಜಲಾಶಯದ ಶೋಧಿಸಿದ ನೀರನ್ನು ಕರ್ಕಿಗೂ, ಶೋಧಿಸದ ನೀರನ್ನು ಪುಣೆಗೂ ಒದಗಿಸಲಾಗುತ್ತಿತ್ತು. ಜನಸಂಖ್ಯೆ ಬೆಳೆದಂತೆ ಸರೋವರದ ನೀರು ಸಾಕಾಗದಾಯಿತು. ಬೇಸಿಗೆಯಲ್ಲಿ ನೀರಿಗೆ ಬರ. ಮಳೆಗಾಲದಲ್ಲಿ ಜಲಾಶಯ ತುಂಬಿ ಕೋಡಿ ಬಿದ್ದು ಹರಿದುಹೋಗುತ್ತಿತ್ತು. ಈ ನೀರನ್ನು ಹಿಡಿದಿಟ್ಟರೆ ಎಲ್ಲಾ ಕಾಲದಲ್ಲೂ ಬಳಸಬಹುದು. ಅದಕ್ಕೆ ಜಲಾಶಯದ ಗೋಡೆ ಎತ್ತರಿಸುವುದು ಒಂದು ಮಾರ್ಗ. ಇದಕ್ಕೆ ಖರ್ಚು ಹೆಚ್ಚು. ಗೋಡೆ ಭದ್ರವಾಗಿ ನಿಲ್ಲುವುದೋ ಇಲ್ಲವೋ ಎಂಬ ಅನುಮಾನ. ಗೋಡೆ ಒಡೆದರೆ ಊರಿಗೆ ಅಪಾಯ. ಏನು ಮಾಡುವುದು? ಇಂಜಿನಿಯರುಗಳಿಗೆ ಆತಂಕ.

ವಿಶ್ವೇಶ್ವರಯ್ಯನವರು ಇದಕ್ಕೆ ಹೊಸ ಉಪಾಯವೊಂದನ್ನು ರೂಪಿಸಿದರು. ಉಕ್ಕಿನ ದೊಡ್ಡ ಬಾಗಿಲುಗಳನ್ನು ಮಾಡಿಸಿದರು. ಇದನ್ನು 'ಫೈಪ್' ಜಲಾಶಯದ ತೂಬಿನಲ್ಲಿ ಸ್ಥಾಪಿಸಿದರು. ಇವು ಸ್ವಯಂ ತೆರೆದುಕೊಳ್ಳುವ ಬಾಗಿಲುಗಳು. ಕೋಡಿಯಲ್ಲಿ ಅನಾವಶ್ಯಕವಾಗಿ ಹರಿದುಹೋಗುವ ನೀರನ್ನು ಎಂಟು ಅಡಿ ಮಟ್ಟದ ಎತ್ತರದವರೆಗೆ ತಡೆಹಿಡಿಯುತ್ತವೆ. ಎಂಟು ಅಡಿ ಭರ್ತಿಯಾಗುತ್ತಲೇ ಈ ಬಾಗಿಲುಗಳು ತಾವಾಗಿಯೇ ತೆರೆದುಕೊಳ್ಳುತ್ತವೆ. ಹೆಚ್ಚುವರಿ ನೀರು ಹರಿದು ಹೋಗುತ್ತದೆ. ಎಂಟು ಅಡಿಗೆ ಇಳಿಯುತ್ತಲೇ ತಾವಾಗಿಯೇ ಮುಚ್ಚಿಕೊಳ್ಳುತ್ತವೆ. ಎಂಥಾ ಅದ್ಭುತ ವ್ಯವಸ್ಥೆ!

ಈ ಬಾಗಿಲುಗಳು ಆಕರ್ಷಣೆಯ ಕೇಂದ್ರವಾದವು. ಇವುಗಳನ್ನು ನೋಡಲು ಇಂಜಿನಿಯರುಗಳು, ಜನಸಾಮಾನ್ಯರು, ಬೊಂಬಾಯಿ ಗವರ್ನರು, ಭಾರತ ಸೇನೆಯ ಮಹಾದಂಡನಾಯಕರು ಮೊದಲಾದವರು ಬಂದಿದ್ದರು. ಈ ಬಾಗಿಲುಗಳನ್ನು ಬೇರೆಯವರು ಮಾಡಿ ಹಣ ಮಾಡಿಕೊಳ್ಳದಂತೆ ವಿಶ್ವೇಶ್ವರಯ್ಯನವರು ಅವುಗಳಿಗೆ ಕೃತಿಚೌರ್ಯ ರಕ್ಷಣೆ

ಮಾಡಿಸಿದರು. ತಮ್ಮ ಈ ಕೆಲಸಕ್ಕೆ ಅವರು ಯಾವುದೇ ರೀತಿಯ ಹಣ ಪಡೆಯಲಿಲ್ಲ. ಇದೇ ಬಗೆಯ ಬಾಗಿಲುಗಳು ಮೈಸೂರಿನ ಕೃಷ್ಣರಾಜ ಸಾಗರ, ಗ್ವಾಲಿಯರ್‌ನ 'ಟಿಗ್ರಾ' ಅಣೆಕಟ್ಟೆಗಳಲ್ಲೂ ಇವೆ.

## 3. ಬೇಸಾಯದಲ್ಲಿ ಹೊಸ ವಿಧಾನ

ಪುಣೆ ಜಿಲ್ಲೆ ನೀರಾವರಿ ಪ್ರದೇಶಕ್ಕೆ ಪ್ರಸಿದ್ಧವಾದುದು. ಭಾರೀ ಜಲಾಶಯಗಳಿಂದ ಬೇಸಾಯಕ್ಕೆ ನೀರು ಒದಗುತ್ತದೆ. ಜಲಾಶಯ ಮತ್ತು ನಾಲೆ ನಿರ್ಮಾಣವಾದರೆ, ಬರಡು ಭೂಮಿಯವರು ತಮಗೂ ನೀರು ಬೇಕು ಎಂದು ಕೇಳುವುದು ಸಹಜ. ಆದರೆ ಎಲ್ಲಾ ಬೇಸಾಯಗಾರರಿಗೂ ನೀರು ಒದಗಿಸುವುದು ಕಷ್ಟ.

ನಾಲೆಯ ಮೇಲ್ಭಾಗದವರಿಗೆ ಸಮೃದ್ಧ ನೀರು. ಕೆಳಭಾಗದವರಿಗೆ ಕಡಿಮೆ. ಇದರಿಂದ ರೈತರಲ್ಲಿ ಅಸಮಾಧಾನ. ಇದನ್ನು ಹೇಗಾದರೂ ಸರಿಪಡಿಸಬೇಕು. ಹತ್ತು ದಿನಗಳಿಗೆ ಒಂದು ಸಾರಿ ಸರದಿಯಂತೆ ಎಲ್ಲರ ಜಮೀನಿಗೂ ನೀರೊದಗಿಸುವುದು ವಿಶ್ವೇಶ್ವರಯ್ಯನವರ ಸಲಹೆ. ಇದರಿಂದ ಹೆಚ್ಚು ನೀರು ಬಳಸುತ್ತಿದ್ದ ಜಮೀನುದಾರರಿಗೆ ಅಸಮಾಧಾನ. ಪ್ರತಿಭಟನೆಯೂ ವ್ಯಕ್ತವಾಯಿತು. ಈ ಸಮಸ್ಯೆಯನ್ನು ಬಗೆಹರಿಸುವ ಜವಾಬ್ದಾರಿಯನ್ನು ಸರ್ಕಾರ ವಿಶ್ವೇಶ್ವರಯ್ಯನವರಿಗೇ ವಹಿಸಿತು.

ಜನತೆಯ ಸಹಕಾರದಿಂದ ಈ ಕೆಲಸ ಸಾಧಿಸಬೇಕು. ಇದು ಅಧಿಕಾರ ಬಲದಿಂದ ಆಗುವುದಿಲ್ಲ ಎಂದು ಅರಿತ ವಿಶ್ವೇಶ್ವರಯ್ಯನವರು ಭೂ ಮಾಲೀಕರು, ರೈತರು ಮತ್ತು ಸಂಬಂಧಪಟ್ಟ ಅಧಿಕಾರಿಗಳ ಸಭೆ ಸೇರಿಸಿದರು. 'ಬ್ಲಾಕ್ ಸಿಸ್ಟಂ' (ವಿಭಾಗ ಪದ್ಧತಿ) ಎಂಬ ಹೊಸ ವ್ಯವಸಾಯ ಪದ್ಧತಿಯನ್ನು ಸಭೆಗೆ ವಿವರಿಸಿದರು. ಅದರ ಪ್ರಕಾರ ಜಮೀನುಗಳನ್ನು ಮೂರು ಭಾಗಗಳಾಗಿ ವಿಂಗಡಿಸುವುದು. ಹೆಚ್ಚು ನೀರು ಬಳಸಿಕೊಳ್ಳುವ ಭತ್ತ, ಕಬ್ಬಿನ ಬೆಳೆಯ ಒಂದು ಭಾಗ. ಕಡಿಮೆ ನೀರು ಬಳಸಿಕೊಳ್ಳುವ ಫಸಲಿನ ಮತ್ತೊಂದು ಭಾಗ. ಖುಷ್ಕಿ ಜಮೀನು ಇನ್ನೊಂದು ಭಾಗ.

ಫಸಲನ್ನು ಅದಲು ಬದಲು ಮಾಡಿಕೊಳ್ಳುವುದು. ಅದರಿಂದ ಭೂಸಾರ ಬಹಳಷ್ಟು ಉಳಿಯುತ್ತದೆ. ಎಲ್ಲರಿಗೂ ಸಾಕಷ್ಟು ನೀರು ಒದಗಿ ಬರುತ್ತದೆ ಮತ್ತು ಪೋಲಾಗುವುದಿಲ್ಲ. ಬೆಳೆ ಅಧಿಕವಾಗುತ್ತದೆ. ಸೊಳ್ಳೆಯ ಕಾಟ, ಮಲೇರಿಯಾದ ಪಿಡುಗು ಕಡಿಮೆಯಾಗುತ್ತದೆ. ನೀರುಗಂಟಿ ನಿಯಮ ದಂತೆ ನೀರು ಬಿಡುತ್ತಾನೆ. ಕಡೆಗೆ ನೀರುಗಂಟಿಯನ್ನು ರೈತರೇ ನೇಮಿಸಿಕೊಳ್ಳಬಹುದು. ಸರ್ಕಾರ ಅವನಿಗೆ ವೇತನ ಕೊಡುತ್ತದೆ. ಇದು ವಿಶ್ವೇಶ್ವರಯ್ಯನವರು ಸಭೆಯ ಮುಂದಿಟ್ಟ ಹೊಸ ವ್ಯವಸಾಯ ಪದ್ಧತಿ.

ನೀರಾ ನದಿ ಪ್ರದೇಶದಲ್ಲಿ ಪ್ರಾಯೋಗಿಕವಾಗಿ 'ಬ್ಲಾಕ್ ಸಿಸ್ಟಂ' ಯೋಜನೆಯನ್ನು ಜಾರಿಗೆ ತರುವ ಹೊಣೆಯನ್ನು ವಿಶ್ವೇಶ್ವರಯ್ಯನವರಿಗೆ ವಹಿಸಲಾಯಿತು. ಈ ಜಿಲ್ಲೆಯ ಜಿಲ್ಲಾಧಿಕಾರಿ, ತಹಶೀಲ್ದಾರ್ ಮತ್ತು ಇತರ ನೌಕರರು ಈ ಯೋಜನೆಗೆ ವಿರೋಧವಾಗಿದ್ದರು. ಜಿಲ್ಲಾಧಿಕಾರಿ ಮತ್ತು ಜಿಲ್ಲೆಯ ಉಪ ಅಧಿಕಾರಿ ಇಬ್ಬರೂ ಆಂಗ್ಲರು. ಕರಿಯ ಭಾರತೀಯನ ಆಜ್ಞೆಯಂತೆ ತಾವು ನಡೆದುಕೊಳ್ಳಬೇಕೇ ಎಂಬ ಅಹಂಕಾರ ಅವರಿಗೆ. ವಿಶ್ವೇಶ್ವರಯ್ಯನವರು ಬೇರೆ ನೌಕರರ ಸಹಕಾರದಿಂದ ತಮ್ಮ ಪ್ರಾಯೋಗಿಕ ಯೋಜನೆ ಆರಂಭಿಸಿದರು. ಜಿಲ್ಲಾಧಿಕಾರಿ, ಜಿಲ್ಲೆಯ ಉಪ ಅಧಿಕಾರಿಯವರ ಅಸಹಕಾರ ಮುಂದುವರೆದಿತ್ತು. ವಿಶ್ವೇಶ್ವರಯ್ಯನವರು, "ಈ ಅಧಿಕಾರಿಗಳು ನಮ್ಮೊಡನೆ ಸಹಕರಿಸುವಂತೆ ಆಜ್ಞಾಪಿಸಿ. ಇಲ್ಲದಿದ್ದರೆ ನನ್ನನ್ನು ಈ ಜವಾಬ್ದಾರಿಯಿಂದ ಮುಕ್ತಗೊಳಿಸಿ" ಎಂದು ಸರ್ಕಾರಕ್ಕೆ ಬರೆದರು.

ಇದೇ ಸಮಯದಲ್ಲಿ ನೀರಾವರಿ ಬೆಳೆ ಹೆಚ್ಚಿಸಲು ಸಲಹೆ ನೀಡುವಂತೆ ಭಾರತ ಸರ್ಕಾರ ಒಂದು ಉನ್ನತ ಮಟ್ಟದ ಆಯೋಗವನ್ನು ನೇಮಿಸಿತು. ವಿಶ್ವೇಶ್ವರಯ್ಯನವರು ಈ ಆಯೋಗಕ್ಕೆ ಮೂರು ತಿಂಗಳ ಕಡಿಮೆ ಅವಧಿಯಲ್ಲಿ ವಿಭಾಗ ಪದ್ಧತಿಯ ವ್ಯವಸಾಯ ಕ್ರಮವನ್ನು ಜಾರಿಗೊಳಿಸು ವುದರ ಬಗ್ಗೆ ಒಂದು ವರದಿಯನ್ನು ಒಪ್ಪಿಸಿದರು. ವರದಿ ಆಯೋಗದ ವಿಶ್ವಾಸಕ್ಕೆ ಪಾತ್ರವಾಯಿತು. ಡೆಕನ್ ಪ್ರಸ್ಥಭೂಮಿಯಲ್ಲಿ ಈ ಪದ್ಧತಿಯನ್ನು ಪ್ರಾಯೋಗಿಕವಾಗಿ ಆಚರಣೆಗೆ ತರುವುದು ಒಳ್ಳೆಯದು ಎಂದು ಆಯೋಗ ಬೊಂಬಾಯಿ ಸರ್ಕಾರಕ್ಕೆ ಶಿಫಾರಸು ಮಾಡಿತು. ಸರ್ಕಾರ

ಅಸಹಕಾರ ತೋರಿದ ಇಬ್ಬರು ಇಂಗ್ಲಿಷ್ ಅಧಿಕಾರಿಗಳನ್ನು ಕರೆಸಿಕೊಂಡು, ವಿಶ್ವೇಶ್ವರಯ್ಯನವರಿಗೆ ಪೂರ್ಣ ಸಹಕಾರ ನೀಡುವಂತೆ ತಿಳಿಸಿತು.

ಈ ಯೋಜನೆಯ ಉಪಯುಕ್ತತೆ ಭೂ ಮಾಲೀಕರಿಗೆ ತಿಳಿಯಬೇಕಿತ್ತು. ವಿಶ್ವೇಶ್ವರಯ್ಯನವರು ಇಬ್ಬರು ದೊಡ್ಡ ಜಮೀನುದಾರರನ್ನು ಕರೆಸಿ ಇದರ ಅನುಕೂಲಗಳನ್ನು ವಿವರಿಸಿ "ಮಾಡಿ ನೋಡಿ, ಉತ್ತಮ ಎನಿಸಿದರೆ ಸರಿ, ಇಲ್ಲದಿದ್ದರೆ ಕೈ ಬಿಡೋಣ. ನಷ್ಟವಾದರೆ ಸರ್ಕಾರ ತುಂಬಿಕೊಡುತ್ತೆ" ಎಂದು ಧೈರ್ಯ ತುಂಬಿದರು. ಪ್ರಯೋಗ ತುಂಬಾ ಯಶಸ್ವಿಯಾಯಿತು. ಬೇರೆ ರೈತರಿಗೆ ಇದು ಮಾರ್ಗದರ್ಶನವಾಯಿತು.

ಬೊಂಬಾಯಿ ಮಂತ್ರಿಮಂಡಲದ ಹಿರಿಯ ಮಂತ್ರಿಯಾಗಿದ್ದ ಸರ್ ಜಾನ್‌ಮೂರ್ ಮೆಕನ್ಜಿಯವರು ವಿಶ್ವೇಶ್ವರಯ್ಯನವರನ್ನು ಹೀಗೆ ಹೊಗಳಿದ್ದಾರೆ : "ನಮ್ಮ ಸರ್ಕಾರದ ಮರಾಮತ್ ಇಲಾಖೆಯಲ್ಲಿ ಇಷ್ಟು ಪ್ರತಿಭಾವಂತ ಇಂಗ್ಲಿಷ್ ಅಥವಾ ಭಾರತೀಯ ಅಧಿಕಾರಿ ಬೇರೊಬ್ಬನಿಲ್ಲ. ಇವರೊಡನೆ ಸಹಕರಿಸುವ ಸೌಭಾಗ್ಯ ನನ್ನದಾಗಿರುವುದಕ್ಕೆ ನನಗೆ ಸಂತೋಷವಾಗಿದೆ."

## 4. ಏಡನ್ ನಗರದ ನೆರವಿಗೆ

ದಕ್ಷತೆ ಪ್ರಾಮಾಣಿಕತೆಗಳಿಗೆ ಹೆಸರಾಗಿದ್ದ ವಿಶ್ವೇಶ್ವರಯ್ಯನವರು ಇಲಾಖೆಯಲ್ಲಿ ಮೇಲಿಂದ ಮೇಲಕ್ಕೆ ಏರುತ್ತಾ ಬಂದರು. ಸರ್ಕಾರ ಕೆಲವು ದೊಡ್ಡ ಹುದ್ದೆಗಳನ್ನು ಇಂಗ್ಲಿಷಿನವರಿಗಾಗಿಯೇ ಮೀಸಲಾಗಿ ಇಡುತ್ತಿತ್ತು. ಇವು ಭಾರತೀಯರಿಗೆ ಸಿಕ್ಕುತ್ತಿರಲಿಲ್ಲ. ಆದರೆ ವಿಶ್ವೇಶ್ವರಯ್ಯನವರು ತಮ್ಮ ಸಾಮರ್ಥ್ಯದಿಂದ ಅಂಥ ಹುದ್ದೆಗಳನ್ನು ಪಡೆದುಕೊಂಡರು. 1904ರಲ್ಲಿ ಅವರು ಬೊಂಬಾಯಿ ಪ್ರಾಂತದ ಸ್ಯಾನಿಟರಿ ಅಥವಾ ಸಫಾಯಿ ವಿಭಾಗದ ಇಂಜಿನಿಯರ್ ಆದರು. ಅದೇ ವರ್ಷದಲ್ಲಿ ಲಂಡನ್ನಿನ ಸಿವಿಲ್ ಇಂಜಿನಿಯರುಗಳ ಸಂಘದ ಸದಸ್ಯರಾದರು. 1907ರಲ್ಲಿ ಸಫಾಯಿ ವಿಭಾಗದ ಹೊಣೆಗಾರಿಕೆಯ ಜತೆಗೆ ಇನ್ನೂ ಎರಡು ಬೇರೆ ಬೇರೆ

ವಿಭಾಗಗಳ ಅಧಿಕಾರಿಯಾಗಿದ್ದರು. ಒಂದೇ ಕಾಲದಲ್ಲಿ ಮೂರು ವಿಭಾಗಗಳ ಮುಖ್ಯ ಇಂಜಿನಿಯರಾಗಿದ್ದರು.

ಇಷ್ಟು ಜವಾಬ್ದಾರಿಯ ಜತೆಗೆ ಸರ್ಕಾರ ಇನ್ನೂ ಒಂದು ಜವಾಬ್ದಾರಿಯನ್ನು ಅವರಿಗೆ ವಹಿಸಿತು. ಇಂಜಿನಿಯರಿಂಗ್ ಶಿಕ್ಷಣ ಕ್ರಮವನ್ನು ಅವಲೋಕಿಸಿ ಸುಧಾರಿತ ಪದ್ಧತಿ ಸೂಚಿಸಲು ರಚಿತವಾಗಿದ್ದ ಸಮಿತಿಗೆ ಅವರನ್ನು ಸದಸ್ಯರನ್ನಾಗಿ ನೇಮಿಸಿತು. ಹೊಸ ಪಠ್ಯಕ್ರಮ ರೂಪಿಸುವುದರಲ್ಲಿ ಇವರ ಪಾತ್ರ ಗಣನೀಯವಾದುದು.

ಜಗತ್ತಿನ ಪೂರ್ವ, ಪಶ್ಚಿಮ ದಿಕ್ಕುಗಳ ಎಲ್ಲಾ ಕಡೆ ಬ್ರಿಟಿಷರ ವಸಾಹತುಗಳು ಇದ್ದವು. ಭಾರತದ ಕಡೆಯಿಂದ ಸೂಯಜ್ ಕಾಲುವೆ ಪ್ರವೇಶಿಸುವಾಗ ಮೊದಲು ಸಿಗುವ ಪ್ರಮುಖ ರೇವು ಪಟ್ಟಣ ಏಡನ್. ತುಂಬಾ ಆಯಕಟ್ಟಿನ ಜಾಗವಿದು. ಇದು ಬ್ರಿಟಿಷರ ಆಳ್ವಿಕೆಯಲ್ಲಿತ್ತು. ಈ ದೂರದ ಏಡನ್ನಿನ ಸಿವಿಲ್(ನಾಗರಿಕ) ವಿಭಾಗದ ಆಡಳಿತ ಬೊಂಬಾಯಿ ಸರ್ಕಾರದ ಹೊಣೆಯಾಗಿತ್ತು. ನೀರು ಒದಗಿಸುವುದು, ನೈರ್ಮಲ್ಯ ಕಾಪಾಡುವುದು, ರಸ್ತೆ, ಚರಂಡಿಯನ್ನು ದುರಸ್ತಿಯಲ್ಲಿಡುವುದು ಬೊಂಬಾಯಿ ಸರ್ಕಾರದ ಜವಾಬ್ದಾರಿ. ಏಡನ್ನಿನಲ್ಲಿ ನೀರಿನ ಅಭಾವದಿಂದ ಎಲ್ಲರೂ ಪರಿತಪಿಸುತ್ತಿದ್ದರು. ಸಮುದ್ರದ ನೀರನ್ನು ಆವಿಯಾಗಿಸಿ, ನೀರಾಗಿ ರೂಪಾಂತರಿಸಿ ಸೈನಿಕರಿಗೆ ಮತ್ತು ಸಾರ್ವಜನಿಕರಿಗೆ ಒದಗಿಸುತ್ತಿದ್ದರು. ಆದರೂ ನಿಸರ್ಗದ ನೀರು ಕೊಡುತ್ತಿದ್ದ ತೃಪ್ತಿ ಇದರಿಂದ ಆಗುತ್ತಿರಲಿಲ್ಲ. ಈ ನೀರಿಗೂ ಸಹ ಹಣ ತೆರಬೇಕಿತ್ತು. ಈ ನೀರಿಗೆ ನೂರು ಗ್ಯಾಲನ್‌ಗೆ ಮೂರು ರೂಪಾಯಿ. ಸಮೀಪದ ಕಟ್ಟೆಯಿಂದ ಗಾಡಿಯಲ್ಲಿ ತರುತ್ತಿದ್ದ ನೀರಿಗೆ ಒಂದರಿಂದ ಒಂದೂವರೆ ರೂಪಾಯಿ. ಅದೂ ಕುಡಿಯಲು ಯೋಗ್ಯವಿರಲಿಲ್ಲ.

ನೀರಿನ ಬವಣೆಯಿಂದ ತತ್ತರಿಸುತ್ತಿದ್ದ ಏಡನ್‌ನ ಪರಿಸ್ಥಿತಿಯನ್ನು ಬಗೆಹರಿಸಲು ಸೂಕ್ತ ಕ್ರಮ ತೆಗೆದುಕೊಳ್ಳುವಂತೆ ಬ್ರಿಟಿಷ್ ಸರ್ಕಾರ ಭಾರತ ಸರ್ಕಾರಕ್ಕೆ ಬರೆಯಿತು. ಭಾರತ ಸರ್ಕಾರ ಇದನ್ನು ಬೊಂಬಾಯಿ ಸರ್ಕಾರಕ್ಕೆ ವಹಿಸಿತು. ಬೊಂಬಾಯಿ ಸರ್ಕಾರಕ್ಕೆ ಇಂಜಿನಿಯರಿಂಗ್ ಸಮಸ್ಯೆ ಬಂದಾಗಲೆಲ್ಲ ಹೊಳೆಯುತ್ತಿದ್ದುದು ವಿಶ್ವೇಶ್ವರಯ್ಯನವರ

ಹೆಸರು. ಸರಿ, ಈ ಸಮಸ್ಯೆ ಬಗೆಹರಿಸಲು ಏಡನ್‌ಗೆ ಹೋಗುವಂತೆ ಸರ್ಕಾರ ವಿಶ್ವೇಶ್ವರಯ್ಯನವರಿಗೆ ಸೂಚಿಸಿತು.

ವಿಶ್ವೇಶ್ವರಯ್ಯನವರು 1906ರಲ್ಲಿ ಏಡನ್‌ಗೆ ಹೋದರು. ಸುತ್ತ ಮುತ್ತಲ ಪ್ರದೇಶದಲ್ಲಿ ಸುತ್ತಾಡಿ ಪರಿಶೀಲಿಸಿದರು. ಅಂಕಿಸಂಖ್ಯೆಗಳಿಂದ ವರದಿ ತಯಾರಿಸಿದರು. ಏಡನ್ನಿನಿಂದ ಅರವತ್ತು ಮೈಲಿಗಳ ಸುತ್ತಮುತ್ತಲ ಪ್ರದೇಶ ಬೆಟ್ಟಗುಡ್ಡಗಳಿಂದ ಸುತ್ತುವರೆದಿದೆ. ಅಲ್ಲಿ ಇಲ್ಲಿ ಸ್ವಲ್ಪ ಮಳೆಯಾಗುತ್ತದೆ. ಇಲ್ಲಿ ಬಿದ್ದ ಮಳೆಯ ನೀರು ಸಣ್ಣ ಹೊಳೆಯಾಗಿ ಸ್ವಲ್ಪ ದೂರ ಹರಿದು, ಮರಳು ಪ್ರದೇಶ ಪ್ರವೇಶಿಸಿ ಮುಂದೆ ಹರಿಯಲಾರದೆ ಮರಳಿನಲ್ಲಿಯೇ ಕಣ್ಮರೆಯಾಗುತ್ತದೆ. ಅಲ್ಲಿ ಭೂಮಿಯೊಳಗೆ ನೀರು ಶೇಖರವಾಗುತ್ತದೆ. ಈ ಜಾಗ ಏಡನ್ನಿನಿಂದ 18 ಮೈಲಿಗಳ ದೂರದಲ್ಲಿದೆ. ಮರಳಿನಲ್ಲಿ ಬಾವಿ ತೋಡಿ ಮೇಲಕ್ಕೆ ಪಂಪ್ ಮಾಡಿ, ನಳಗಳ ಮೂಲಕ ಏಡನ್ನಿಗೆ ನೀರು ಒದಗಿಸುವಂತೆ ಸೂಚಿಸಿದರು.

ಏಡನ್ ನಗರದ ಒಳಚರಂಡಿ ವ್ಯವಸ್ಥೆಗೆ ಅಲ್ಲಿನ ಏರುಪೇರು, ಹಳ್ಳತಿಟ್ಟು ಎಲ್ಲಾ ಪರಿಶೀಲಿಸಿದರು. ಏಡನ್ ನಗರದ ಸುತ್ತಮುತ್ತಲ ಜನನ-ಮರಣ ಸಂಖ್ಯೆ ಸಂಗ್ರಹಿಸಿದರು. ಒಳಚರಂಡಿ ಇರದ ಕಡೆ ಮರಣ ಸಂಖ್ಯೆ ಜಾಸ್ತಿ, ಒಳಚರಂಡಿ ಇರುವ ಕಡೆ ಮರಣ ಸಂಖ್ಯೆ ಕಡಿಮೆ ಎಂದು ತೋರಿಸಿಕೊಟ್ಟರು. ಈ ದೃಷ್ಟಿಯಿಂದ ಏಡನ್ ನಗರಕ್ಕೆ ಒಳಚರಂಡಿ ವ್ಯವಸ್ಥೆ ಅಗತ್ಯವೆಂದು ಸಾರಿದರು.

ಸರ್ಕಾರ ಇವರ ವರದಿಯನ್ನು ಒಪ್ಪಿಕೊಂಡು ಜಾರಿಗೆ ತಂದಿತು. ಇವರ ಕೆಲಸವನ್ನು ಮೆಚ್ಚಿ 'ಕೈಸರ್-ಎ-ಹಿಂದ್' ಪ್ರಶಸ್ತಿ ಪದಕ ನೀಡಿತು.

## 5. ಸ್ವಾಭಿಮಾನ

ಕೊಲ್ಲಾಪುರವು ಮಹಾಲಕ್ಷ್ಮಿ ದೇವಾಲಯಕ್ಕೆ ಪ್ರಸಿದ್ಧವಾದ ಯಾತ್ರಾಸ್ಥಳ. ಇಲ್ಲಿನ ದೊಡ್ಡಕೆರೆಯನ್ನು ಮಣ್ಣಿನಿಂದ ಕಟ್ಟಲಾಗಿತ್ತು. ನಗರದ ಕುಡಿಯುವ ನೀರಿಗೂ ಇದೇ ಆಶ್ರಯ. ಒಂದು ಸಾರಿ ಕೆರೆಯ ಏರಿಯ ದೊಡ್ಡ ಭಾಗ

ಕುಸಿಯಿತು. ಅಪಾಯದ ಸ್ಥಿತಿ ಒದಗಿತು. ಕೆರೆಯ ನೀರೆಲ್ಲಾ ಹರಿದು ಬರಿದಾಗುವ ಸ್ಥಿತಿ ಬಂದಿತು. ಕೆರೆ ಬರಿದಾದರೆ ಊರಿಗೆ ಕುಡಿಯಲು ನೀರಿಲ್ಲ. ಕೂಡಲೇ ಅಲ್ಲಿಯ ಮಹಾರಾಜರು ಬೊಂಬಾಯಿ ಸರ್ಕಾರಕ್ಕೆ ತುರ್ತು ತಂತಿ ಸಂದೇಶವೊಂದನ್ನು ಕಳಿಸಿದರು. ಕೆರೆಯನ್ನು ಕಟ್ಟೆ ಭದ್ರಪಡಿಸಬಲ್ಲ ಸಮರ್ಥ ಇಂಗ್ಲಿಷ್ ಇಂಜಿನಿಯರನ್ನು ಕೂಡಲೇ ಕಳಿಸಿ – ಇದು ತಂತಿಯ ಸಾರಾಂಶ.

ಕೇಳಿದ್ದು ಇಂಗ್ಲಿಷ್ ಇಂಜಿಯನಿಯರನ್ನು. ಆದರೆ ಸರ್ಕಾರ ಕಳಿಸಿದ್ದು ವಿಶ್ವೇಶ್ವರಯ್ಯನವರನ್ನು. ಇಂಗ್ಲಿಷ್ ಇಂಜಿನಿಯರುಗಳಿಗೆ ಕೊರತೆ ಇರಲಿಲ್ಲ. ಆದರೆ ವಿಚಾರಶೀಲ, ಅನುಭವಿಗಳ ಅಭಾವ ಇತ್ತು.

ವಿಶ್ವೇಶ್ವರಯ್ಯನವರು ಕೂಡಲೇ ಕೊಲ್ಲಾಪುರಕ್ಕೆ ಹೋದರು. ಕೆರೆಯ ಸ್ಥಿತಿಯನ್ನು ವಿವರವಾಗಿ ಪರಿಶೀಲಿಸಿದರು. ದುರಸ್ತಿ ಮಾಡಬೇಕಾದ ಕ್ರಮ ಸಿದ್ಧಪಡಿಸಿದರು. ತಮ್ಮ ಸಲಹೆಯನ್ನು ಸ್ವಲ್ಪವೂ ತಪ್ಪದೆ ಕೆಲಸ ಮಾಡಬೇಕೆಂದು ಸ್ಥಳೀಯ ಇಂಜಿನಿಯರುಗಳಿಗೆ ಎಚ್ಚರಿಕೆ ಕೊಟ್ಟರು. ಇವರ ಸಲಹೆಯಂತೆ ಕೆಲಸ ನಡೆದು ಕಟ್ಟೆ ಮೊದಲಿಗಿಂತ ಭದ್ರವಾಯಿತು. ಮಳೆ ಬಂದು ಕೆರೆ ತುಂಬಿತು. ಕೋಡಿ ಹರಿಯಿತು. ಕಟ್ಟೆ ಒಡೆಯಲಿಲ್ಲ. ಮಹಾರಾಜರಿಗೆ ಸಂತೋಷವಾಯಿತು. ತಮ್ಮ ಮೆಚ್ಚುಗೆ ವ್ಯಕ್ತಪಡಿಸಿ ಬೊಂಬಾಯಿ ಸರ್ಕಾರಕ್ಕೆ ಪತ್ರ ಬರೆದರು.

ವಿಶ್ವೇಶ್ವರಯ್ಯನವರು ತಮ್ಮ ಸಾಮರ್ಥ್ಯ, ಬುದ್ಧಿವಂತಿಕೆ, ಕಾಲಕ್ಷಮತೆ, ಪ್ರಾಮಾಣಿಕತೆ ಇವುಗಳಿಂದ ಸರ್ಕಾರ ಹಾಗೂ ಸಾರ್ವಜನಿಕರ ಗೌರವ ಗಳಿಸಿದರು. ಇವರ ಸಾಮರ್ಥ್ಯವನ್ನು ಗಮನಿಸಿ ಸರ್ಕಾರ ಬೇಗ ಬೇಗನೆ ಬಡ್ತಿ ಕೊಡುತ್ತಾ ಬಂತು. 18 ಇಂಗ್ಲಿಷ್ ಅಧಿಕಾರಿಗಳ ಮೇಲೆ ಇವರಿಗೆ ಬಡ್ತಿ ದೊರೆಯಿತು. ಇದರಿಂದ ಹಲವರಿಗೆ ಅಸೂಯೆ, ಅಸಮಾಧಾನ. ಆ ಕಾಲಕ್ಕೆ ಹಲವು ಉನ್ನತ ಸ್ಥಾನಗಳು ಆಂಗ್ಲರಿಗೆ ಮೀಸಲಾಗಿದ್ದವು. ಮುಖ್ಯ ಇಂಜಿನಿಯರ್ ಸ್ಥಾನವೂ ಅವರಿಗೆ ಮೀಸಲಾಗಿತ್ತು.

ಬಹು ಬೇಗ ಮೇಲೇರುತ್ತಿದ್ದ ವಿಶ್ವೇಶ್ವರಯ್ಯನವರಿಗೆ ಮುಖ್ಯ ಇಂಜಿನಿಯರ್ ಸ್ಥಾನ ದೊರೆಯಬೇಕಾಗಿತ್ತು. ಆದರೆ, ಮೀಸಲಾತಿ

ನಿಯಮ ಇದಕ್ಕೆ ಅಡ್ಡಿಯಾಗಿತ್ತು. ಎಲ್ಲ ದೃಷ್ಟಿಯಿಂದ ಅವರು ಈ ಸ್ಥಾನಕ್ಕೆ ಅರ್ಹರಾಗಿದ್ದರು. ಈ ಸ್ಥಾನ ಸಿಗದಿದ್ದರೆ ರಾಜೀನಾಮೆ ಸಲ್ಲಿಸಲು ನಿರ್ಧರಿಸಿದರು. ಈ ಸುದ್ದಿ ತಿಳಿದ ಹಿತೈಷಿಗಳೂ, ಸಹೋದ್ಯೋಗಿಗಳೂ ರಾಜೀನಾಮೆ ಕೊಡಬೇಡಿ ಎಂದು ಅವರ ಮನಸ್ಸನ್ನು ಬದಲಾಯಿಸಲು ಪ್ರಯತ್ನಿಸಿದರು. ಅವರು ಕೆಲಸಕ್ಕೆ ಸೇರಿ ಇಪ್ಪತ್ತೂರು ವರ್ಷಗಳಾಗಿದ್ದವು. ಪಿಂಚಣಿಗೆ ಅರ್ಹರಾಗಲು ಇನ್ನು ಎರಡು ವರ್ಷ ಕಳೆಯಬೇಕಿತ್ತು. ಯಾರೇ ಒತ್ತಾಯ ಮಾಡಿದರೂ ಅವರು ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ. ರಾಜೀನಾಮೆ ಪತ್ರವನ್ನು ಗವರ್ನರಿಗೆ ಕಳಿಸಿಕೊಟ್ಟರು.

ರಾಜೀನಾಮೆ ಪತ್ರ ನೋಡಿ ಗವರ್ನರ್ ಲಾರ್ಡ್ ಸಿಡನ್‌ಹ್ಯಾಂ ಚಕಿತರಾದರು. ವಿಶ್ವೇಶ್ವರಯ್ಯನವರನ್ನು ಕರೆಸಿಕೊಂಡರು. ರಾಜೀನಾಮೆಯನ್ನು ಹಿಂತೆಗೆದುಕೊಳ್ಳುವಂತೆ ಮನ ಒಲಿಸಲು ಬಹಳ ಪ್ರಯತ್ನಿಸಿದರು. ತಾನು ಅಧಿಕಾರದಲ್ಲಿ ಸ್ವಲ್ಪ ಕಾಲ ಮುಂದುವರಿದರೆ, ಮೀಸಲಾತಿ ನಿಯಮ ಬದಲಾಯಿಸುತ್ತೇನೆ. ಭಾರತೀಯರೂ ಉನ್ನತ ಸ್ಥಾನಕ್ಕೆ ಬರುವ ಅವಕಾಶ ಕಲ್ಪಿಸಿಕೊಡುತ್ತೇನೆ ಎಂಬ ಭರವಸೆ ನೀಡಿದರು.

ಇಪ್ಪತ್ತೈದು ವರ್ಷ ಸೇವೆ ಸಲ್ಲಿಸಿ ಪಿಂಚಣಿ ಪಡೆಯುವ ಸದವಕಾಶ ಒಂದು ಕಡೆ. ಇದರಿಂದ ಸುಖವಾದ ಜೀವನ ನಡೆಸಬಹುದಾದ ಆಮಿಷ. ಆದರೆ ಸ್ವಾಭಿಮಾನ, ದೇಶಾಭಿಮಾನ ಇನ್ನೊಂದು ಕಡೆ. ಯಾವುದನ್ನು ಆರಿಸಿಕೊಳ್ಳಬೇಕೆಂಬ ಉಭಯ ಸಂಕಟ. ಹಣ ಹೇಗಾದರೂ ಗಳಿಸಬಹುದು. ಆದರೆ ಸ್ವಾಭಿಮಾನ, ದೇಶಾಭಿಮಾನ ಹಣಕ್ಕಿಂತ ಮಿಗಿಲು. ಭಾರತೀಯರ ಸಾಮರ್ಥ್ಯ ಕಡೆಗಣಿಸುವ ದುರಭಿಮಾನಕ್ಕೆ ತಲೆ ಬಾಗಬಾರದು. ವಿಶ್ವೇಶ್ವರಯ್ಯನವರು ಆಸೆ, ಆಮಿಷಗಳಿಗೆ ಮಣಿಯಲಿಲ್ಲ. ರಾಜೀನಾಮೆಯನ್ನು ಹಿಂತೆಗೆದುಕೊಳ್ಳಲಿಲ್ಲ.

ಲಾರ್ಡ್ ಸಿಡನ್‌ಹ್ಯಾಂಗೆ ವಿಶ್ವೇಶ್ವರಯ್ಯನವರಲ್ಲಿ ತುಂಬಾ ಅಭಿಮಾನ ಇತ್ತು. ಅವರು ವಿಶ್ವೇಶ್ವರಯ್ಯನವರಿಗೆ ಪೂರ್ಣಾವಧಿಯ ನಿವೃತ್ತಿ ವೇತನ ಕೊಡಿಸಿದರು.

# 6. ಮೂಸಿ ಪ್ರವಾಹದ ಪ್ರಕೋಪ

ವಿಶ್ವೇಶ್ವರಯ್ಯನವರು 1908ರ ಮೇ ತಿಂಗಳಲ್ಲಿ ಬೊಂಬಾಯಿ ಸರಕಾರದ ಕೆಲಸದಿಂದ ನಿವೃತ್ತರಾದರು. ಅನಂತರ ಹೆಚ್ಚಿನ ಜ್ಞಾನ ಪಡೆಯಲು ಪಶ್ಚಿಮದ ದೇಶಗಳಿಗೆ ಪ್ರವಾಸ ಹೊರಟರು. ಲಂಡನ್ನಿನಲ್ಲಿ ಇದ್ದಾಗ ಅವರ ಸೇವೆ ಹೈದರಾಬಾದ್ ಸರ್ಕಾರಕ್ಕೆ ಬೇಕಾಗಿದೆ ಎಂಬ ತಂತಿಯನ್ನು ಇಂಡಿಯಾ ಸರ್ಕಾರ ಕಳಿಸಿತು. ತಕ್ಷಣ ಭಾರತಕ್ಕೆ ಮರಳುವಂತೆ ಕೇಳಿಕೊಳ್ಳಲಾಗಿತ್ತು. ಆದರೆ ಮೊದಲೇ ಏರ್ಪಾಡಾಗಿದ್ದ ಪ್ರವಾಸವನ್ನು ಹಠಾತ್ತಾಗಿ ಮುಗಿಸಿ ವಾಪಸ್ಸಾಗಲು ಅವರು ಇಷ್ಟಪಡಲಿಲ್ಲ. ಐದು ತಿಂಗಳ ನಂತರ ಪ್ರವಾಸ ಮುಗಿಸಿ ಬರುವುದಾಗಿ ತಿಳಿಸಿದರು. ತಾವು ಬರುವುದಕ್ಕೆ ಕೆಲವು ಷರತ್ತುಗಳನ್ನು ವಿಧಿಸಿದರು. ಹೈದರಾಬಾದಿನ ವಿಭಾಗದ ಅಧಿಕಾರಿ ಇಂಗ್ಲಿಷಿನವನು. ಅವನಿಗೆ ಭಾರತೀಯನಿಗಿಂತ ಹೆಚ್ಚು ಸಂಬಳ. ಇಂಗ್ಲಿಷ್ ಅಧಿಕಾರಿಗೆ ಕೊಡುವ ಸಂಬಳವನ್ನು ತನಗೂ ಕೊಡಬೇಕು, ತನಗೆ ಬೇಕಾದ ಸಹಾಯಕರನ್ನು ನೇಮಿಸಿಕೊಳ್ಳುವ ಸ್ವಾತಂತ್ರ್ಯ ಇರಬೇಕು. ಇವು ಷರತ್ತಿನ ಮುಖ್ಯ ಅಂಶಗಳು. ನಿಜಾಮರು ಈ ಷರತ್ತುಗಳನ್ನು ಒಪ್ಪಿಕೊಂಡರು.

ಅಮೆರಿಕಾ, ಕೆನಡ, ರಷ್ಯಾ ದೇಶಗಳ ಪ್ರವಾಸ ಮುಗಿಸಿ 1909ರ ಏಪ್ರಿಲ್‌ನಲ್ಲಿ ವಿಶ್ವೇಶ್ವರಯ್ಯನವರು ಭಾರತಕ್ಕೆ ಮರಳಿದರು. ಏಪ್ರಿಲ್ 15ರಂದು ಹೈದರಾಬಾದಿನ ವಿಶೇಷ ಇಂಜಿನಿಯರ್ ಆಗಿ ಅಧಿಕಾರ ಸ್ವೀಕರಿಸಿದರು. ಹೈದರಾಬಾದ್ ನಗರ ಮಹಾ ಪ್ರಳಯದ ದುರಂತಕ್ಕೆ ಬಲಿಯಾಗಿತ್ತು. ಹೈದರಾಬಾದ್ ನಗರದ ಪುನರ್ನಿರ್ಮಾಣ ಆಗಬೇಕಿತ್ತು. ಇದಕ್ಕೆ ಸೂಕ್ತ ಯೋಜನೆಯನ್ನು ಸಿದ್ಧಪಡಿಸುವುದು ವಿಶ್ವೇಶ್ವರಯ್ಯನವರ ಹೊಣೆಯಾಯಿತು.

ಮೂಸಿ ಮತ್ತು ಇಯಾಸಿ ಅವಳಿಜವಳಿ ನದಿಗಳು. ಮೂಸಿ ಹೈದರಾಬಾದ್ ನಡುವೆ ಹರಿಯುತ್ತದೆ. ನದಿಯ ಎರಡೂ ದಡಗಳಲ್ಲಿ ನಗರ ಬೆಳೆದಿದೆ. ನದಿ ಅಷ್ಟು ದೊಡ್ಡದಲ್ಲ. ಆದರೆ ಮಳೆಗಾಲದಲ್ಲಿ ಹುಚ್ಚು ಹೊಳೆಯಾಗಿ ಹರಿಯುತ್ತದೆ. ಇದರಿಂದ ಅಪಾರ ನಷ್ಟ, ಪ್ರಾಣಹಾನಿ

ಆಗುತ್ತದೆ. 1908ರಲ್ಲಿ ಹಿಂದೆ ಎಂದೂ ಸಂಭವಿಸದ ದುರಂತ ಸಂಭವಿಸಿತು. ಸಂಸ್ಥಾನದ ಕೆಲವೆಡೆ 12ರಿಂದ 18 ಅಂಗುಲ ಮಳೆ ಒಂದೇ ದಿನದಲ್ಲಿ ಸುರಿದಿತ್ತು. ಇದರಿಂದ ನದಿ ಉಕ್ಕಿ ಹರಿದು ಜಲ ಪ್ರಳಯವಾಗಿತ್ತು.

ವಹಿಸಿಕೊಂಡ ಕೆಲಸದ ಪೂರ್ಣ ಪರಿಶೀಲನೆ ನಡೆಸುವುದು ವಿಶ್ವೇಶ್ವರಯ್ಯನವರ ಕ್ರಮ. ನದಿಯ ಉಗಮದಿಂದ ಸಂಗಮದವರೆಗೆ ಸಮೀಕ್ಷೆ ನಡೆಸಿದರು. ಪ್ರವಾಹದಿಂದ ಸಂಭವಿಸಿದ ದುರಂತದ ಹಿಂದಿನ ವರದಿಗಳನ್ನು ಪರಿಶೀಲಿಸಿದರು. ನೆರೆಯ ಪ್ರಾಂತಗಳಾದ ಬೊಂಬಾಯಿ, ಮದರಾಸಿನ ಮಳೆಯ ಅಂಕಿಅಂಶಗಳನ್ನು ಸಂಗ್ರಹಿಸಿದರು. ಪ್ರಪಂಚದ ಹಲವು ಭಾಗಗಳಲ್ಲಿ ಸಂಭವಿಸಿದ ಅತಿವೃಷ್ಟಿಯ ವರದಿಗಳನ್ನೂ ಪರಿಶೀಲಿಸಿದರು. ಹೈದರಾಬಾದಿನ ಮೇಲ್ಭಾಗದ ಮೂಸಿ ಜಲಾನಯನ ಪ್ರದೇಶದಲ್ಲಿ 788 ಕೆರೆಗಳು ಇವೆ. ಮೂರು ಚದರ ಮೈಲಿಗೆ ಸರಾಸರಿ ಐದು ಕೆರೆಗಳು. ಇವುಗಳ ಪೈಕಿ 221 ಕೆರೆಗಳು ಮಳೆಯ ಪ್ರಭಾವದಿಂದ ಒಡೆದವು. ತುಂಬಾ ದೊಡ್ಡದಾದ ಪಾಲ್ಮಕೆರೆ ಮತ್ತು ಪಾರ್ತಿಕೆರೆಗಳ ಜಲಾಯನ ಪ್ರದೇಶಗಳಲ್ಲಿ ಭಾರಿ ಮಳೆ ಸುರಿಯಿತು. ಪಾರ್ತಿಕೆರೆ ಹೈದರಾಬಾದಿನಿಂದ 22 ಮೈಲಿಗಳ ಮೇಲ್ಗಡೆ ಇದೆ. ಈ ಜಲಾಶಯ ಒಡೆದಿದ್ದು ಬೆಳಗ್ಗೆ 5 ಗಂಟೆಗೆ. ಗಂಟೆಗೆ ನಾಲ್ಕು ಮೈಲಿಗಳ ವೇಗದಲ್ಲಿ ನೀರು ಹರಿಯುತ್ತಿತ್ತು. ಪ್ರವಾಹ ಹೈದರಾಬಾದಿನಲ್ಲಿ ಬೆಳಿಗ್ಗೆ 11 ಗಂಟೆಗೆ ಅತ್ಯುನ್ನತ ಮಟ್ಟಕ್ಕೆ ಏರಿತು. ಇದು ವಿಶ್ವೇಶ್ವರಯ್ಯನವರು ನಿಜಾಮರ ಸರ್ಕಾರಕ್ಕೆ ಒಪ್ಪಿಸಿದ ವರದಿಯ ಕೆಲವು ಮುಖ್ಯಾಂಶಗಳು.

ಪ್ರವಾಹದ ಹೆಚ್ಚಿನ ನೀರನ್ನು ತಡೆಹಿಡಿದು ಸಂಗ್ರಹಿಸಲು ಮೂಸಿ ನದಿಗೆ ಅಡ್ಡಲಾಗಿ ಹೈದರಾಬಾದಿನಿಂದ ಎಂಟೂವರೆ ಮೈಲಿಗಳ ಆಚೆ ಮೇಲ್ಭಾಗದಲ್ಲಿ ಒಂದು ಜಲಾಶಯ; ಆರೂವರೆ ಮೈಲಿಗಳ ಮೇಲೆ ಇಯೂಸಿ ನದಿಗೆ ಮತ್ತೊಂದು ಕಟ್ಟೆ ನಿರ್ಮಾಣ. ನಗರದ ಒಳಭಾಗದಲ್ಲಿ ಮೂಸಿ ನದಿಯ ಎರಡೂ ದಡಗಳನ್ನು ಎತ್ತರಿಸಿ ಉದ್ಯಾನವನ ನಿರ್ಮಾಣ. ಇವು ಅವರು ಸೂಚಿಸಿದ ಪರಿಹಾರಗಳು.

ನಿಜಾಮ್ ಸರ್ಕಾರ ಮದರಾಸು ಸರ್ಕಾರದಲ್ಲಿದ್ದ ರಾಸ್ಕೊ ಅಲೆನ್ ಎಂಬ ಇಂಗ್ಲಿಷ್ ಇಂಜಿನಿಯರಿಗೆ ವಿಶ್ವೇಶ್ವರಯ್ಯನವರ ವರದಿ ಕಳಿಸಿ

ಅಭಿಪ್ರಾಯ ಕೇಳಿತು. "ವರದಿ ದೋಷಮುಕ್ತವಾಗಿದೆ. ತಡ ಮಾಡದೆ ಕಾರ್ಯಗತಗೊಳಿಸಿ" ಎಂದು ರಾಸ್ಕೊ ಅಲೆನ್ ವರದಿಯನ್ನು ಹೊಗಳಿ ಕಳಿಸಿಕೊಟ್ಟ.

ಇದಲ್ಲದೆ ಒಳಚರಂಡಿ ವ್ಯವಸ್ಥೆ, ಮೋರಿಯ ರೊಚ್ಚೆಯನ್ನು ಊರಿನಾಚೆಗೆ ಸಾಗಿಸಿ ಅದನ್ನು ಶುದ್ಧಮಾಡಿ ಬೇಸಾಯಕ್ಕೆ ಬಳಸಿಕೊಳ್ಳ ಬಹುದಾದ ಕ್ರಮ; ನಗರದ ಮುಖ್ಯ ಬೀದಿಗಳನ್ನು ವಿಸ್ತರಿಸಿ, 'ಸಿಮೆಂಟ್' ಮತ್ತು 'ಮ್ಯಾಕೆಡು' ಧೂಳು ರಹಿತ ರಸ್ತೆಗಳ ನಿರ್ಮಾಣ; ಉದ್ಯಾನವನ, ಪ್ರವಾಹದ ವಿಕೋಪದಿಂದ ಮನೆಗಳನ್ನು ಕಳೆದುಕೊಂಡ ಬಡವರಿಗೆ ಮನೆಗಳನ್ನು ಕಟ್ಟಿಸಿಕೊಡುವುದು ಇವೆಲ್ಲಾ ವರದಿಯಲ್ಲಿ ಅಡಕವಾಗಿವೆ.

ವಿಶ್ವೇಶ್ವರಯ್ಯನವರು ವರದಿಯನ್ನು ಸಕಾಲದಲ್ಲಿ ಒಪ್ಪಿಸಿದರೂ ಕೆಲಸ ಪ್ರಾರಂಭವಾಗಲು ಮೂರು ವರ್ಷಗಳಾದವು. ಮೂಸಾ ನದಿಯ ಅಣೆಕಟ್ಟಿನ ಶಂಕುಸ್ಥಾಪನೆ 1913ರಲ್ಲಿ ನೆರವೇರಿತು. ಅಣೆಕಟ್ಟಿನ ನಿರ್ಮಾಣಕಾರ್ಯ ಪ್ರಾರಂಭವಾಗುವುದರೊಳಗೆ ವಿಶ್ವೇಶ್ವರಯ್ಯನವರು ಮೈಸೂರಿನ ದಿವಾನರಾಗಿದ್ದರು. ಮೈಸೂರಿನ ದಿವಾನ್ ಪದವಿಯಿಂದ ನಿವೃತ್ತರಾದ ಮೇಲೆ, ನಿಜಾಮ್ ಸರ್ಕಾರದ ಕೋರಿಕೆಯಂತೆ ಹೈದರಾ ಬಾದಿಗೆ ಹೋದರು. ಕೆಲಸ ಪೂರ್ಣವಾಗಲು ನೆರವಾದರು. ಮೂಸಿ ಮತ್ತು ಇಯಾಸಿ ನದಿಗಳಿಗೆ ಕಟ್ಟಲಾದ ಕಟ್ಟೆಗಳೇ ಹಿಮಾಯತ್ ಸಾಗರ ಮತ್ತು ಉಸ್ಮಾನ ಸಾಗರ. ಅವು ಹೈದರಾಬಾದ್, ಸಿಕಂದರಾಬಾದ್ ನಗರಗಳಿಗೆ ನೀರೊದಗಿಸುತ್ತವೆ.

ವಿಶ್ವೇಶ್ವರಯ್ಯನವರ ಸಾಮರ್ಥ್ಯ ಕುರಿತು ನಿಜಾಮ್ ಸರ್ಕಾರದ ಮುಖ್ಯ ಇಂಜಿನಿಯರ್ ಮೆಕೆನ್ಜಿ ಹೇಳಿರುವುದು ಗಮನಾರ್ಹ: "ದಿವಂಗತ ನಿಜಾಮರ ಸಲಹೆಗಾರರು ಈ ಯೋಜನೆಗೆ ದಕ್ಷ ಇಂಜಿನಿಯರನ್ನು ನೇಮಿಸುವುದರಲ್ಲಿ ಪ್ರದರ್ಶಿಸಿರುವ ಜಾಣ್ಮೆ ಹೈದರಾಬಾದಿನ ಅದೃಷ್ಟ ವೆಂದೇ ಹೇಳಬೇಕು. ಭಾರತದ ಇಂಜಿನಿಯರುಗಳಲ್ಲಿ ಅತ್ಯಂತ ಪ್ರತಿಭಾನ್ವಿತರಾದ, ಈಗ ಮೈಸೂರಿನ ದಿವಾನರಾಗಿರುವ ಮತ್ತು ಜೀವನದ ಯಾವ ರಂಗವನ್ನೇ ಪ್ರವೇಶಿಸಲಿ, ನಿಸ್ಸಂದೇಹವಾಗಿ ಖ್ಯಾತಿ

ಗಳಿಸಬಲ್ಲ ವಿಶ್ವೇಶ್ವರಯ್ಯನವರ ಸೇವೆಯ ಫಲ ಪಡೆದಿರುವುದು ನಮ್ಮ ಸೌಭಾಗ್ಯವೇ ಸರಿ". ಇದೇ ಮೆಕೆನ್ಜಿ ಮೊದಲು ವಿಶ್ವೇಶ್ವರಯ್ಯನವರೊಂದಿಗೆ ಸಹಕರಿಸಲು ನಿರಾಕರಿಸಿದ್ದರು. ಅಹಂಭಾವದಿಂದ ಸಹಕರಿಸಲು ನಿರಾಕರಿಸಿದವರಿಂದಲೇ ಈ ಹೊಗಳಿಕೆ.

## 7. ಮೈಸೂರಿಗೆ ಪಾದಾರ್ಪಣೆ

ಬೊಂಬಾಯಿ ಸರ್ಕಾರದ ಉದ್ಯೋಗ ಬಿಟ್ಟಾಗಲೇ ವಿಶ್ವೇಶ್ವರಯ್ಯನವರನ್ನು ಮೈಸೂರಿನ ಮುಖ್ಯ ಇಂಜಿನಿಯರ್ ಆಗಿ ನೇಮಿಸಿಕೊಳ್ಳಬೇಕೆಂಬ ಆಸೆ ಮೈಸೂರು ಮಹಾರಾಜರಿಗಿತ್ತು. ಆದರೆ ವಿಶ್ವೇಶ್ವರಯ್ಯನವರು ಹೊರ ದೇಶಗಳಿಗೆ ಪ್ರವಾಸ ಹೋದರು. ಬಂದನಂತರ ಹೈದರಾಬಾದಿಗೆ ಹೋದರು. ಅಲ್ಲಿಯ ಕೆಲಸ ಮುಗಿಯುವುದರ ಒಳಗೆ ಮೈಸೂರಿನ ಮುಖ್ಯ ಇಂಜಿನಿಯರಾಗಿದ್ದ ಮ್ಯಾಕ್ ಹಚಿನ್ ನಿವೃತ್ತರಾದರು. ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್, ದಿವಾನ್ ಆನಂದರಾಯರ ಮೂಲಕ ವಿಶ್ವೇಶ್ವರಯ್ಯನವರಿಗೆ ಮೈಸೂರಿನ ಮುಖ್ಯ ಇಂಜಿನಿಯರಾಗಿ ಬರುವಂತೆ ಆಮಂತ್ರಣ ಕಳಿಸಿದರು.

ವಿಶ್ವೇಶ್ವರಯ್ಯನವರು 1909ರ ನವೆಂಬರ್ 15ರಂದು ಮೈಸೂರಿನ ಮುಖ್ಯ ಇಂಜಿನಿಯರ್ ಆಗಿ ಅಧಿಕಾರ ಸ್ವೀಕರಿಸಿದರು. ಪದಾಧಿಕಾರದಿಂದ ಇವರು ರೈಲ್ವೆ ಮತ್ತು ಮರಾಮತ್ ಇಲಾಖೆಯ ಕಾರ್ಯದರ್ಶಿ ಸಹ ಆಗಿದ್ದರು. ಮೂರು ವರ್ಷಗಳ ಕಾಲ ಈ ಸ್ಥಾನದಲ್ಲಿದ್ದರು. ಇದೇ ಕಾಲಕ್ಕೆ ಶಿಕ್ಷಣದ ಪ್ರಗತಿಗೆ, ಕೈಗಾರಿಕೆಯ ಅಭಿವೃದ್ಧಿಗೆ ಎರಡು ಸಮಿತಿಗಳು ರಚಿತವಾದವು. ಎರಡು ಸಮಿತಿಗಳಿಗೂ ವಿಶ್ವೇಶ್ವರಯ್ಯನವರೇ ಅಧ್ಯಕ್ಷರು.

ವಿಶ್ವೇಶ್ವರಯ್ಯನವರಿಗೆ ತಮ್ಮ ಕೆಲಸದಲ್ಲಿ ಪೂರ್ಣ ಸ್ವಾತಂತ್ರ್ಯ ಇತ್ತು. ಮೈಸೂರನ್ನು ಆರ್ಥಿಕವಾಗಿ ಸಂಪದ್ಭರಿತವಾಗಿ, ವೈಜ್ಞಾನಿಕವಾಗಿ ಆಧುನಿಕವಾಗಿ, ಕೈಗಾರಿಕೆಗಳಲ್ಲಿ ಪ್ರಗತಿಪರವಾಗಿ, ಶಿಕ್ಷಣದಲ್ಲಿ ಎಲ್ಲರನ್ನೂ

ಅಕ್ಷರಸ್ಥರನ್ನಾಗಿ ಮಾಡಬೇಕೆಂಬ ಕನಸು ಕಾಣುತ್ತಿದ್ದರು. ಈ ಗುರಿ ಸಾಧನೆಗಾಗಿ ಮುಂದೆ ದಿವಾನ್ ಪದವಿಯಿಂದ ನಿವೃತ್ತರಾಗುವವರೆಗೂ ತಮ್ಮ ಶಕ್ತಿಯನ್ನು ವಿನಿಯೋಗಿಸಿದರು.

ವಿಶ್ವೇಶ್ವರಯ್ಯನವರು ವಿದ್ಯಾರ್ಹತೆ, ಯೋಗ್ಯತೆ ಮತ್ತು ಅನುಭವ ಗಳಿಗೆ ಆದ್ಯತೆ ಕೊಡುತ್ತಿದ್ದರು. ಇವರು ಮರಾಮತ್ ಇಲಾಖೆಯ ಕಾರ್ಯದರ್ಶಿ ಆಗಿದ್ದಾಗ ಕೆಲವು ಸ್ಥಾನಗಳಿಗೆ ಜನರನ್ನು ತುಂಬಬೇಕಿತ್ತು. ಅರ್ಜಿಗಳನ್ನು ಸ್ವೀಕರಿಸಿದ ಇಲಾಖೆಯ ಮುಖ್ಯಾಧಿಕಾರಿ ಅರ್ಜಿದಾರರ ಅರ್ಹತೆಗನುಸಾರವಾಗಿ ಪಟ್ಟಿ ಮಾಡಿ ಕಳಿಸಿಕೊಡಬೇಕಿತ್ತು. ಆದರೆ ಮುಖ್ಯಾಧಿಕಾರಿ ಅರ್ಜಿಗಳನ್ನು ಕಳಿಸುವಾಗ ಅರ್ಜಿದಾರ ಯಾವ ಉನ್ನತ ಅಧಿಕಾರಿಯ ಬಳಗ, ಶಿಫಾರಸು ಮಾಡಿದವರ ಹೆಸರು, ಮೊದಲಾದ ವಿವರ ಬರೆದು ಕಳಿಸಿದ್ದ. ಆ ಪಟ್ಟಿಯನ್ನು ಹಿಂದಕ್ಕೆ ಕಳಿಸಿ ಅರ್ಹತೆ, ಯೋಗ್ಯತೆಗಳಿಗನುಗುಣವಾಗಿ ಪಟ್ಟಿ ಮಾಡಿ ಕಳಿಸುವಂತೆ ತಿಳಿಸಿದರು. ದಾಕ್ಷಿಣ್ಯಕ್ಕೆ ಮಣಿಯದೆ ಯೋಗ್ಯತೆಯನ್ನು ಪುರಸ್ಕರಿಸಿ ಅಭ್ಯರ್ಥಿಗಳನ್ನು ಆಯ್ಕೆಮಾಡಿದರು.

ವಿಶ್ವೇಶ್ವರಯ್ಯನವರು ಮೂರು ವರ್ಷಕಾಲ ಮುಖ್ಯ ಇಂಜಿನಿಯ ರಾಗಿದ್ದರು. ಅವರ ಸಮರ್ಪಕ ಕಾರ್ಯದಿಂದ ಮಹಾರಾಜರು ಅವರನ್ನು ದಿವಾನರಾಗಿ ನೇಮಿಸಿದರು. ಅಲ್ಲಿಯವರೆಗೆ ಸಿವಿಲಿಯನ್ ಅಧಿಕಾರಿಗಳು ಮಾತ್ರ ದಿವಾನರಾಗಿದ್ದರು. ಒಬ್ಬ ಖ್ಯಾತಿವೆತ್ತ ಇಂಜಿನಿಯರ್ ದಕ್ಷ ಆಡಳಿತಗಾರನಾಗಬಲ್ಲನೆ? ಇದು ಅನೇಕರಿಗೆ ಬಂದ ಸಂದೇಹ. ಆದರೆ ಆರು ವರ್ಷಕಾಲ ಅವರು ದಿವಾನರಾಗಿ ಸಲ್ಲಿಸಿದ ಸೇವೆ ಅವಿಸ್ಮರಣೀಯ ವಾದುದು.

ಇದುವರೆಗೂ ವಿಶ್ವೇಶ್ವರಯ್ಯನವರು ಉನ್ನತ ಅಧಿಕಾರಿಗಳ ಆದೇಶ ದಂತೆ ಕಾರ್ಯನಿರ್ವಹಿಸಬೇಕಿತ್ತು. ಈಗ ಅವರೇ ಸಂಸ್ಥಾನದ ಮುಖ್ಯ ಆಡಳಿತಾಧಿಕಾರಿ. ದಿವಾನರಾಗಿ ಬಹುಮಟ್ಟಿಗೆ ಸ್ವತಂತ್ರರಾಗಿ ಕೆಲಸ ನಿರ್ವಹಿಸುವ ಅವಕಾಶ. ನಾಡಿನ ಸೇವೆಗೆ ಅವಕಾಶ ಸಿಕ್ಕಿದ್ದಕ್ಕಾಗಿ ಅವರಿಗೆ ಸಂತೋಷವಾಯಿತು. ದಿವಾನ್ ಪದವಿ ಸ್ವೀಕರಿಸಿದಾಗ ಶ್ರೀ ಮನ್ಮಹಾ

ರಾಜರ ಮತ್ತು ಈ ನಾಡಿನ ಸೇವೆ ಸಲ್ಲಿಸುವ ಅವಕಾಶ ದೊರಕಿತಲ್ಲ ಇದೇ ಸಾಕು ಎಂದು ಹೇಳಿದರು.

ವಿಶ್ವೇಶ್ವರಯ್ಯನವರು ದಿವಾನರಾಗುತ್ತಲೇ ನಾಡಿಗೆ ಜೀವಕಳೆ ಬಂತು. ನಿದ್ರಾವಸ್ಥೆಯ ನಿರಾಶವಾದಿ ಜನತೆಯನ್ನು ಜಾಗ್ರತಗೊಳಿಸಿದರು. ಕೆ. ಎಚ್. ರಾಮಯ್ಯ ಎಂಬುವರು ವಿಶ್ವೇಶ್ವರಯ್ಯನವರನ್ನು ಎಕ್ಸ್‌ಪ್ರೆಸ್ ಉಗಿಬಂಡಿಯ ಇಂಜಿನ್ನಿಗೆ ಹೋಲಿಸಿರುತ್ತಾರೆ. ಜನ ಗೂಡ್ಸ್ ಅಥವಾ ಸರಕು ಒಯ್ಯುವ ರೈಲಿನಂತೆ ಎಂದಿದ್ದಾರೆ. ಭದ್ರಾವತಿಯ ಕಬ್ಬಿಣ ಕಾರ್ಖಾನೆಯ ಸಲಹೆಗಾರ ಅಮೆರಿಕಾದ ಪೆರಿನ್ ಎಂಬುವರು "ವಿಶ್ವೇಶ್ವರಯ್ಯನವರ ಚಾಟಿಯ ಏಟು ನಿರ್ಜೀವ ಕುದುರೆಯನ್ನು ಸಹ ಬಡಿದೆಬ್ಬಿಸಬಲ್ಲದು" ಎಂದಿರುತ್ತಾರೆ. ಲೇಖಕರಾದ ಸಿದ್ದವನಹಳ್ಳಿ ಕೃಷ್ಣಶರ್ಮ "ನಾಡಿನ ಹೊಲಸನ್ನೆಲ್ಲಾ ಹೊತ್ತು ಸಾಗಿಸಬೇಕೆಂಬ ಬಿರುಗಾಳಿ" ಎನ್ನುತ್ತಾರೆ. ಅಂಥ ಚೇತನ ಶಕ್ತಿಸ್ವರೂಪಿ. ದೇಹ ಕೃಶಾಂಗಿ, ಶಕ್ತಿ ಸರ್ವಾಂಗಿ.

ಸೋಮಾರಿತನ, ಮೈಗಳ್ಳತನ ಕಂಡರೆ, ಅವರಿಗೆ ಸಿಡಿಮಿಡಿ. "ನಮ್ಮವರು ಕಷ್ಟಪಟ್ಟು ಮೈದಣಿಸಿ ದುಡಿಯುವವರಲ್ಲ. ಯೂರೋಪಿನಲ್ಲಿರುವುದಕ್ಕಿಂತ ದಿನಗೆಲಸದ ಅವಧಿ ನಮ್ಮಲ್ಲಿ ಕಡಿಮೆ. ರಜಾ ದಿನಗಳು, ಹಬ್ಬ ಹುಣ್ಣಿಮೆಗಳು, ಹುಟ್ಟು ಹಬ್ಬಗಳು ಹೆಚ್ಚು. ಸರ್ಕಾರಿ ಚಾಕರಿ ದೊರೆತರೆ ಸಾಕು ಅನ್ನವೇನೋ ಭದ್ರ, ಶಾಶ್ವತ. ಅವನು ದಡ್ಡನಿರಲಿ, ಬುದ್ಧಿವಂತನಿರಲಿ, ಸೋಮಾರಿಯಿರಲಿ, ಚುರುಟಿಯಿರಲಿ, ಬಡ್ತಿ ತಾನಾಗಿ ಏರುತ್ತಾ ಹೋಗುವುದು" ಎಂದಿದ್ದಾರೆ. ಅವರು ಬೆಳಗಿನಿಂದ ರಾತ್ರಿಯ ವರೆಗೆ ಗಡಿಯಾರದ ಮುಳ್ಳಿನಂತೆ ಅವಿಶ್ರಾಂತವಾಗಿ ದುಡಿಯುತ್ತಿದ್ದರು. "ನಿಮ್ಮ ಅಂತ್ಯಕಾಲದ ಬಯಕೆ ಏನು?" ಎಂದು ಅವರನ್ನು ಪ್ರಶ್ನಿಸಿದಾಗ "ಉಸಿರು ನಿಲ್ಲುವ ಕ್ಷಣದವರೆಗೂ ದುಡಿಯುತ್ತಿರಬೇಕು, ಉಳಿದೆಲ್ಲಾ ಆಸೆಗಳಿಗಿಂತ, ಹೆಚ್ಚಿನ ಆಸೆ ಇದು. ನನ್ನ ಕಟ್ಟ ಕಡೆಯ ಬಯಕೆಯೇ ಇದು" ಎಂದಿರುತ್ತಾರೆ.

# 8. ವಿದ್ಯೆಯ ವಿತರಣೆ

ಪಶ್ಚಿಮದ ದೇಶಗಳಿಗೆ ವಿಶ್ವೇಶ್ವರಯ್ಯನವರು ಹಲವು ಬಾರಿ ಹೋಗಿದ್ದರು. ಆ ದೇಶಗಳ ಪ್ರಗತಿಯ ಕಾರಣವನ್ನು ಆಳವಾಗಿ ವಿಶ್ಲೇಷಿಸಿದ್ದರು. ವಿದ್ಯೆ ಸಕಲ ಸಮಸ್ಯೆಗಳ ಸಂಜೀವಿನಿ. ಸರ್ವಾರ್ಥ ಸಾಧನ. ನಮ್ಮಲ್ಲಿ ವಿದ್ಯಾವಂತರೆನಿಸಿಕೊಳ್ಳುವವರ ಸಂಖ್ಯೆ ಅಪರೂಪ. ಆ ದೇಶಗಳಲ್ಲಿ ಅವಿದ್ಯಾವಂತರು ಅಪರೂಪ. ಜಪಾನ್ ದೇಶದ ಶಿಕ್ಷಣ ವ್ಯವಸ್ಥೆ ಅವರ ಮೇಲೆ ಆಳವಾದ ಪರಿಣಾಮ ಬೀರಿತ್ತು. ನಮ್ಮ ದೇಶದಲ್ಲಿ ಆ ಬಗೆಯ ಶಿಕ್ಷಣ ವ್ಯವಸ್ಥೆ ಸ್ಥಾಪಿತವಾಗಬೇಕು. ನಮ್ಮ ದೇಶದ ವಿಶ್ವವಿದ್ಯಾಲಯಗಳಲ್ಲಿ ಸೈನಿಕ ಶಿಕ್ಷಣ ಕಡ್ಡಾಯವಾಗಬೇಕು. ಇವು ಶಿಕ್ಷಣ ಕ್ಷೇತ್ರದಲ್ಲಿ ಅವರ ಹೆಬ್ಬಯಕೆಯಾಗಿದ್ದವು.



ಶಿಕ್ಷಣ ಕ್ಷೇತ್ರಕ್ಕೆ ವಿಶ್ವೇಶ್ವರಯ್ಯನವರು ನೀಡಿದ ಕೊಡುಗೆಯ ದ್ಯೋತಕ ಬೆಂಗಳೂರಿನ ಸಿಲ್ವರ್ ಜ್ಯೂಬಿಲಿ ಟೆಕ್ನಲಾಜಿಕಲ್ ಇನ್‌ಸ್ಟಿಟ್ಯೂಟ್

ವ್ಯವಸಾಯ, ಕೈಗಾರಿಕೆ, ಕಮ್ಮಾರ, ಚಮ್ಮಾರ ಮೊದಲಾದ ದೈಹಿಕ ಶ್ರಮದಲ್ಲಿ ತೊಡಗಿರುವವರಿಗೆ ವಿದ್ಯೆ ಅನಾವಶ್ಯಕ ಎಂಬ ಭಾವನೆ ಇತ್ತು. ಆದರೆ ವಿಶ್ವೇಶ್ವರಯ್ಯನವರ ದೃಷ್ಟಿಯೇ ಬೇರೆ ಇತ್ತು. ಕಲಿಕೆ ಅವರಿಗೆ

ಸಹಾಯಕವಾಗುತ್ತದೆ. ವಿಜ್ಞಾನದ ಸಂಶೋಧನೆಗಳನ್ನು ಬಳಸಿಕೊಳ್ಳಲು ಸಹಾಯವಾಗುತ್ತದೆ ಎಂದು ತಿಳಿದಿದ್ದರು. ಈ ದೃಷ್ಟಿಯಿಂದ ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಪ್ರಾಯೋಗಿಕವಾಗಿ ಪ್ರಾಥಮಿಕ ಶಿಕ್ಷಣ ಜಾರಿಗೆ ತಂದರು. ಕಡ್ಡಾಯ ಶಿಕ್ಷಣ ಶಾಸನ ಜಾರಿಗೆ ಬಂತು. ಜೂನ್ 1918ರಲ್ಲಿ ಕಡ್ಡಾಯ ಶಿಕ್ಷಣ ಶಾಸನ 68 ಕೇಂದ್ರಗಳಲ್ಲಿ ಆಚರಣೆಯಲ್ಲಿತ್ತು. ಅಲ್ಲದೆ 170 ಕೇಂದ್ರಗಳಿಗೆ ವಿಸ್ತರಿಸಲು ಮುಂಗಡ ಕ್ರಮ ಕೈಗೊಳ್ಳಲಾಗಿತ್ತು. ವಿದ್ಯಾರ್ಥಿಗಳ ಸಂಖ್ಯೆ ಬೆಳೆದಂತೆ ಶಿಕ್ಷಕರ ಹಾಗೂ ಶಾಲಾ ಕಟ್ಟಡಗಳ ಅಗತ್ಯವೂ ಬೆಳೆಯಿತು. ಶಾಲಾ ಕಟ್ಟಡಗಳಿಗಾಗಿ ಮತ್ತು ಶಿಕ್ಷಣದ ವೆಚ್ಚಕ್ಕಾಗಿ ಧನಸಹಾಯ ನೀಡುವ ಪದ್ಧತಿ ಜಾರಿಗೆ ಬಂತು. ಗ್ರಾಮಾಂತರ ಪ್ರದೇಶಗಳಲ್ಲಿ ಇದಕ್ಕೆ ಉತ್ತಮ ಪ್ರತಿಕ್ರಿಯೆ ಕಂಡುಬಂತು.

ಅಸ್ಪೃಶ್ಯರ ಮತ್ತು ಹಿಂದುಳಿದವರ ವಿದ್ಯಾಭ್ಯಾಸಕ್ಕಾಗಿ ವಿದ್ಯಾರ್ಥಿ ವೇತನ ನೀಡುವ ವ್ಯವಸ್ಥೆಯನ್ನು ಮೊಟ್ಟಮೊದಲ ಬಾರಿಗೆ ವಿಶ್ವೇಶ್ವರಯ್ಯನವರು ಮಾಡಿದರು. ಶಾಲೆಗೆ ಈ ವರ್ಗದವರು ಹೋಗುತ್ತಿದ್ದುದು ಕಡಿಮೆ. ಶಾಲೆಗೆ ಹೋಗುವ ಇವರ ಸಂಖ್ಯೆಯನ್ನು ಐದು ವರ್ಷಗಳಲ್ಲಿ ದ್ವಿಗುಣಗೊಳಿಸುವುದು ಇವರ ಉದ್ದೇಶವಾಗಿತ್ತು.

ಹೆಣ್ಣುಮಕ್ಕಳು ಶಾಲೆಗೆ ಹೋಗುವುದನ್ನು ಕಂಡರೆ ಜನ ಹುಬ್ಬು ಹಾರಿಸುತ್ತಿದ್ದರು. ಹೆಣ್ಣುಮಕ್ಕಳು ಶಾಲೆಗೆ ಹೋಗುವುದನ್ನು ಸಮಾಜ ಒಪ್ಪುತ್ತಿರಲಿಲ್ಲ. ಇವರು ಸ್ತ್ರೀ ಶಿಕ್ಷಣಕ್ಕೆ ವಿಶೇಷ ಗಮನ ಹರಿಸಿದರು. ಐದು ವರ್ಷಗಳ ಅವಧಿಯಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಎರಡುಪಟ್ಟು ಏರಿತು. 1917ರಲ್ಲಿ ಮೈಸೂರಿನ ಮಹಿಳೆಯರ ಮಹಾರಾಣಿ ಕಾಲೇಜನ್ನು ಪ್ರಥಮ ದರ್ಜೆಗೆ ಏರಿಸಲಾಯಿತು. ಇಲ್ಲಿ ಬಿ. ಎ. ಡಿಗ್ರಿ ಶಿಕ್ಷಣಕ್ಕೆ ವ್ಯವಸ್ಥೆ ಮಾಡಲಾಯಿತು. ಅದೇ ವರ್ಷ ಮಹಿಳೆಯರಿಗಾಗಿ ಪ್ರತ್ಯೇಕ ವಿದ್ಯಾರ್ಥಿ ನಿಲಯ ಅಸ್ತಿತ್ವಕ್ಕೆ ಬಂತು.

ಅದುವರೆಗೂ ತಾಂತ್ರಿಕ ಶಿಕ್ಷಣ, ಔದ್ಯೋಗಿಕ ಶಿಕ್ಷಣ, ಸಾಮಾಜಿಕ ಶಿಕ್ಷಣ, ವ್ಯಾವಹಾರಿಕ ಶಿಕ್ಷಣ, ಇವುಗಳಿಗೆ ಹೆಚ್ಚು ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ಯಂತ್ರ ತಂತ್ರ ಕಲಿಸುವುದು ತಾಂತ್ರಿಕ ಶಿಕ್ಷಣದ

ಉದ್ದೇಶ. ವ್ಯಾಪಾರ, ವಾಣಿಜ್ಯ, ಲೆಕ್ಕ ಇಡುವುದು, ಪತ್ರ ಬರೆಯುವುದು, ಶೀಘ್ರಲಿಪಿ, ಬೆರಳಚ್ಚು ಇವು ಔದ್ಯೋಗಿಕ ಶಿಕ್ಷಣದ ಗುರಿ. ಸಮಾಜದಲ್ಲಿ ನಡೆದುಕೊಳ್ಳಬೇಕಾದ ರೀತಿ - ನೀತಿ, ಪೌರ ಕರ್ತವ್ಯ, ರಾಷ್ಟ್ರದ ಏಳ್ಗೆಯಲ್ಲಿ ಪ್ರಜೆಯ ಪಾತ್ರ ಇವೆಲ್ಲಾ ಸಾಮಾಜಿಕ ಶಿಕ್ಷಣಕ್ಕೆ ಸೇರಿದ ವಿಭಾಗಗಳು. ಇವುಗಳಿಗೆ ಇವರ ಕಾಲದಲ್ಲಿ ಉತ್ತೇಜನ ದೊರಕಿತು.

ನಮ್ಮ ದೇಶದಲ್ಲಿ ಹೆಚ್ಚು ಜನ ಬೇಸಾಯದಿಂದ ಬದುಕುತ್ತಾರೆ. ವ್ಯವಸಾಯದಲ್ಲಿ ತೊಡಗಿದವರಿಗೆ ವೈಜ್ಞಾನಿಕ ಶಿಕ್ಷಣದ ವ್ಯವಸ್ಥೆ ಇರಲಿಲ್ಲ. ಅದಕ್ಕಾಗಿ 1913ರಲ್ಲಿ ಬೆಂಗಳೂರಿನ ಬಳಿಯ ಹೆಬ್ಬಾಳದಲ್ಲಿ ವ್ಯವಸಾಯ ಶಿಕ್ಷಣ ಶಾಲೆಯೊಂದನ್ನು ಸ್ಥಾಪಿಸಿದರು. ಅಲ್ಲಿಯೇ ಪ್ರಯೋಗ ನಡೆಸಿ, ತರಿ, ಖುಷ್ಕಿ ಬೆಳೆ ಬೆಳೆಯಲು ವಿಸ್ತಾರವಾದ ಜಮೀನನ್ನು ಶಾಲೆಗೆ ಕೊಡುಗೆಯಾಗಿ ನೀಡಲಾಯಿತು. ಸಣ್ಣ ಹಿಡುವಳಿದಾರರಿಗೆ ಅಲ್ಪಾವಧಿಯ ಶಿಕ್ಷಣವನ್ನು ಕನ್ನಡದಲ್ಲಿ ಕೊಡುವ ವ್ಯವಸ್ಥೆ ಮಾಡ ಲಾಯಿತು. ಪ್ರಾಯೋಗಿಕ ಬೇಸಾಯ ಕ್ಷೇತ್ರಗಳನ್ನು ಸ್ಥಾಪಿಸಿದರು.

ಎಲ್ಲಾ ಜಿಲ್ಲಾ ಕೇಂದ್ರಗಳಲ್ಲೂ ಔದ್ಯೋಗಿಕ ಶಿಕ್ಷಣ ಶಾಲೆಗಳು ಸ್ಥಾಪಿತವಾದವು. ವ್ಯಾಪಾರದಲ್ಲಿ ತೊಡಗಿರುವವರ ಅನುಕೂಲಕ್ಕಾಗಿ ಸಾಯಂಕಾಲದ ಶಾಲೆಗಳನ್ನು ತೆರೆದರು. ಪಶ್ಚಿಮ ದೇಶಗಳಿಗೆ ಹೋಗಿ ಆಧುನಿಕ ಶಿಕ್ಷಣ ಪಡೆಯಲು ಉದಾರ ವಿದ್ಯಾರ್ಥಿವೇತನಗಳನ್ನು ಕೊಡಲು ಶುರುಮಾಡಲಾಯಿತು.

ನೂತನ ಶಿಕ್ಷಣ ಪದ್ಧತಿಯೊಂದನ್ನು ರೂಪಿಸಲು ವಿಶೇಷ ಸಮಿತಿಗಳನ್ನು ನೇಮಿಸಿದರು. ಸುಲಭ, ಸರಳ, ವೈಜ್ಞಾನಿಕ ಮತ್ತು ತಾಂತ್ರಿಕ ಪಠ್ಯ ಪುಸ್ತಕಗಳು ಸಿದ್ಧವಾದವು. ಹೊಸ ಬೋಧನಾ ವಿಧಾನಗಳು ರೂಪಿತ ವಾದವು. ಗೃಹ ಕೈಗಾರಿಕೆ, ಗೃಹ ಶಿಕ್ಷಣ ಇವು ಆಚರಣೆಗೆ ಬಂದವು.

ಬೆಂಗಳೂರು ಮತ್ತು ಮೈಸೂರು ನಗರಗಳಲ್ಲಿ ಸಾರ್ವಜನಿಕ ಗ್ರಂಥಾಲಯಗಳು ಪ್ರಾರಂಭವಾದವು. ಗ್ರಾಮಾಂತರ ಪ್ರದೇಶಕ್ಕೆ ಗಾಡಿಗಳ ಮೂಲಕ ಪುಸ್ತಕ ವಿತರಿಸುವ ವ್ಯವಸ್ಥೆ ಮಾಡಲಾಯಿತು.

ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ಸ್ಥಾಪಿತವಾಯಿತು. ಸರಳ ವಿಜ್ಞಾನ ಬೋಧಕ ಪುಸ್ತಕಗಳನ್ನು ರಚಿಸುವ ಹೊಣೆಯನ್ನು ಪರಿಷತ್ತಿಗೆ

ವಹಿಸಲಾಯಿತು. ಕನ್ನಡ ನುಡಿಯು, ಕರ್ನಾಟಕ ಸಂಸ್ಕೃತಿಯ ಬೆಳವಣಿಗೆ ಪರಿಷತ್ತಿನ ಹೊಣೆ ಆಯಿತು.

ಮೈಸೂರಿನ ಉನ್ನತ ಶಿಕ್ಷಣದ ಕಾಲೇಜು ವ್ಯಾಸಂಗ ಮದರಾಸು ವಿಶ್ವವಿದ್ಯಾಲಯದ ಅಧೀನದಲ್ಲಿತ್ತು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನ, ಗಣಿತ ಕಲಿಸಲಾಗುತ್ತಿತ್ತು. ಮೈಸೂರಿನ ಮಹಾರಾಜ ಮತ್ತು ಮಹಾರಾಣಿ ಕಾಲೇಜುಗಳಲ್ಲಿ ಚರಿತ್ರೆ, ತರ್ಕಶಾಸ್ತ್ರ, ದರ್ಶನಶಾಸ್ತ್ರ, ಅರ್ಥಶಾಸ್ತ್ರ ಮತ್ತು ರಾಜ್ಯಶಾಸ್ತ್ರಗಳನ್ನು ಕಲಿಸಲಾಗುತ್ತಿತ್ತು. ಈ ಕಾಲೇಜುಗಳು ಮತ್ತೊಂದು ಪ್ರಾಂತ್ಯದ ಆಡಳಿತಕ್ಕೆ ಒಳಪಟ್ಟಿದ್ದುದು ಶಿಕ್ಷಣದ ಪ್ರಗತಿಗೆ ಅಡಚಣೆಯಾಗಿತ್ತು. ತನ್ನ ಸಂಸ್ಕೃತಿಗೆ, ತನ್ನ ನಾಡಿನ ಬೆಳವಣಿಗೆಗೆ ಅಗತ್ಯವಾದ ಶಿಕ್ಷಣ ಪದ್ಧತಿಯನ್ನು ರೂಪಿಸಿಕೊಳ್ಳುವ ಸ್ವಾತಂತ್ರ್ಯ ಮೈಸೂರು ಸಂಸ್ಥಾನಕ್ಕೆ ಅಗತ್ಯ. ವಿಶ್ವವಿದ್ಯಾಲಯ ನಮ್ಮ ಸಂಸ್ಕೃತಿಯ ಕೇಂದ್ರವಾಗಬೇಕು. ನಾಡಿನ ಮೂಲೆ ಮೂಲೆಯಲ್ಲೂ ಹರಡಿರುವ ಅಜ್ಞಾನವನ್ನು ತೊಡೆದು ಹಾಕಬೇಕು. ವರ್ತಕರು, ಉದ್ಯಮಿಗಳು, ಶಾಸ್ತ್ರ ನಿಪುಣರು, ತಂತ್ರಜ್ಞರು, ವಿಜ್ಞಾನಿಗಳು, ವಕೀಲರು, ಇಂಜಿನಿಯರುಗಳು, ದೇಶದ ಹಿತಚಿಂತಕರನ್ನು ರೂಪಿಸುವುದು ಮೈಸೂರು ವಿಶ್ವವಿದ್ಯಾಲಯದ ಗುರಿಯಾಗಬೇಕು. ಇದು ವಿಶ್ವೇಶ್ವರಯ್ಯನವರ ಆಲೋಚನೆ.

ಇಂಥ ವಿಶ್ವವಿದ್ಯಾಲಯವನ್ನು ರೂಪಿಸಲು ಸಲಹೆ ನೀಡಲು ಒಂದು ಸಮಿತಿಯನ್ನು ರಚಿಸಿದರು. ಈ ಸಮಿತಿಯನ್ನು ಪಶ್ಚಿಮ ದೇಶಗಳ ವಿಶ್ವವಿದ್ಯಾಲಯಗಳ ಧೋರಣೆ, ಶಿಕ್ಷಣ ಕ್ರಮ, ಆಡಳಿತ ವಿಧಾನಗಳನ್ನು ಅಧ್ಯಯನ ಮಾಡಿ ಬರಲು ಕಳಿಸಿಕೊಟ್ಟರು. ಸಮಿತಿಯ ಸದಸ್ಯರು ಹಿಂತಿರುಗಿ ಬಂದು ತಮ್ಮ ಸಮಿತಿಯ ವರದಿಯನ್ನು ನೀಡಿದರು. ವೈಸ್‌ರಾಯ್ ಲಾರ್ಡ್ ಹಾರ್ಡಿಂಜ್ ಅವರಿಗೆ ವಿಶ್ವವಿದ್ಯಾಲಯ ಸ್ಥಾಪಿಸಲು ಅನುಮತಿ ಕೊಡಬೇಕೆಂದು ಮನವಿ ಸಲ್ಲಿಸಲಾಯಿತು. ಪ್ರತ್ಯೇಕ ವಿಶ್ವವಿದ್ಯಾಲಯದ ಸ್ಥಾಪನೆಗೆ ಹಲವಾರು ಅಡ್ಡಿಆತಂಕಗಳು ಬಂದವು. ಸೆಂಟ್ರಲ್ ಕಾಲೇಜಿನ ಪ್ರಿನ್ಸಿಪಾಲ್ ಟೇಟ್ ಅವರು ಮೈಸೂರು

ವಿಶ್ವವಿದ್ಯಾಲಯದ ಅಧೀನದಲ್ಲಿ ಕೆಲಸ ಮಾಡಲು ಒಪ್ಪಲಿಲ್ಲ. ಆದರೆ ವಿಶ್ವೇಶ್ವರಯ್ಯನವರು ಹಿಡಿದ ಛಲ ಬಿಡಲಿಲ್ಲ. ಅದರ ಫಲವಾಗಿ 1916ರ ಜುಲೈ 22ರಂದು ಮೈಸೂರು ವಿಶ್ವವಿದ್ಯಾಲಯ ಜನ್ಮ ತಾಳಿತು. ದೇಶೀಯ ಸಂಸ್ಥಾನಗಳಲ್ಲಿ ಮೊಟ್ಟ ಮೊದಲನೆಯ ಸ್ವತಂತ್ರ ವಿಶ್ವವಿದ್ಯಾಲಯವನ್ನು ಸ್ಥಾಪಿಸಿದ ಕೀರ್ತಿಯನ್ನು ಮೈಸೂರು ಗಳಿಸಿತು.

## 9. ಕೃಷ್ಣರಾಜಸಾಗರ

ಮೈಸೂರಿನಿಂದ 12 ಮೈಲಿ, ಶ್ರೀರಂಗಪಟ್ಟಣದಿಂದ 9 ಮೈಲಿಗಳ ದೂರದಲ್ಲಿರುವ ಜಾಗ ಕನ್ನಂಬಾಡಿ ಕಟ್ಟೆ. ಈಗ ಕೃಷ್ಣರಾಜಸಾಗರ ಎಂಬುದು ಜನಬಳಕೆಯ ಮಾತು. ಇದು ಕಾವೇರಿ ನದಿಗೆ ಕಟ್ಟಿರುವ ಅಣೆಕಟ್ಟು. ಈ ಸಾಗರದ ಕೆಳಗಿರುವ ಬೃಂದಾವನ ಸುಂದರ ಸ್ಥಳ. ಇದರ ಯೋಜಕರು ಮತ್ತು ನಿರ್ಮಾಪಕರು ಸರ್ ಎಂ. ವಿಶ್ವೇಶ್ವರಯ್ಯನವರು.

ವಿಶ್ವೇಶ್ವರಯ್ಯನವರು ಮುಖ್ಯ ಇಂಜಿನಿಯರ್ ಆಗಿದ್ದಾಗಲೇ ಕೃಷ್ಣ ರಾಜಸಾಗರ ಅಣೆಕಟ್ಟೆಯ ವಿನ್ಯಾಸ, ತಗಲಬಹುದಾದ ವೆಚ್ಚವನ್ನು ಸಿದ್ಧಪಡಿಸಿದರು. ಸರ್ಕಾರದ ಅಂಗೀಕಾರಕ್ಕಾಗಿ ಒಪ್ಪಿಸಿದ್ದರು. ಅಂದಾಜು ವೆಚ್ಚ 253 ಲಕ್ಷ ರೂಪಾಯಿ. ಮೈಸೂರು ಸರ್ಕಾರದ ಆಗಿನ ವಾರ್ಷಿಕ ವರಮಾನ 223 ಲಕ್ಷ. ಇದೇ ಯೋಜನೆ ಜೊತೆಗೆ ರೈಲು ರಸ್ತೆಯನ್ನು ವಿಸ್ತರಿಸುವ 94 ಲಕ್ಷ ರೂಪಾಯಿಗಳ ಯೋಜನೆಯನ್ನು ಸಲ್ಲಿಸಿದ್ದರು. ಸರ್ಕಾರದ ಆರ್ಥಿಕ ಇಲಾಖೆ ಎರಡನೆಯ ಯೋಜನೆಗೆ ಒಪ್ಪಿತು. ಅಪಾರ ವೆಚ್ಚದ ಕಾವೇರಿ ಯೋಜನೆಗೆ ವಿರೋಧ ವ್ಯಕ್ತಪಡಿಸಿತ್ತು. ಈ ಯೋಜನೆ ಬರೀ ನೀರಾವರಿ ಯೋಜನೆ ಆಗಿರಲಿಲ್ಲ. ಕೋಲಾರದ ಚಿನ್ನದ ಗಣಿಗೆ ವಿದ್ಯುತ್ ಒದಗಿಸುವುದು ಇದರಲ್ಲಿ ಸೇರಿತ್ತು. ಶಿವನಸಮುದ್ರದಲ್ಲಿ ಉತ್ಪನ್ನವಾಗುತ್ತಿದ್ದ ವಿದ್ಯುತ್ತನ್ನು ಕೋಲಾರದ ಚಿನ್ನದ ಗಣಿಗೆ ಒದಗಿಸಲಾಗುತ್ತಿತ್ತು. ಇದು ಸಾಕಾಗುತ್ತಿರಲಿಲ್ಲ. ಕಾರಣ ಕಾವೇರಿ ನದಿಯ ಪರಿಮಿತ. ಈ ಯೋಜನೆಯಿಂದ ಏಕಪ್ರಕಾರವಾಗಿ ವಿದ್ಯುಚ್ಛಕ್ತಿ ಉತ್ಪಾದಿಸಲು ಶಿವನ

ಸಮುದ್ರಕ್ಕೆ ನೀರೊದಗಿಸಬಹುದು. ಇದು ಯೋಜನೆಯ ಒಂದು ಮುಖ್ಯ ಅಂಶ. ಆರ್ಥಿಕ ಇಲಾಖೆಯ ನಿರ್ಧಾರ ವಿಶ್ವೇಶ್ವರಯ್ಯನವರ ಉತ್ಸಾಹಕ್ಕೆ ತಣ್ಣೀರು ಎರಚಿತ್ತು. ಮಹಾರಾಜರಿಗೂ, ದಿವಾನರಾಗಿದ್ದ ಆನಂದರಾಯರಿಗೂ ಇದಕ್ಕೆ ಅಂಗೀಕಾರ ನೀಡುವುದು ಕಷ್ಟವಾಯಿತು. ತಮ್ಮ ಆಸೆ ಈಡೇರದ್ದರಿಂದ ಬೇಸರಗೊಂಡ ವಿಶ್ವೇಶ್ವರಯ್ಯನವರು ಆರು ತಿಂಗಳ ರಜ ಪಡೆದು ಉತ್ತರ ಭಾರತದ ಪ್ರವಾಸಕ್ಕೆ ಹೋದರು.

ಪ್ರವಾಸದಿಂದ ಹಿಂದಿರುಗಿದರು. ಆದರೆ ಕೆಲಸದಲ್ಲಿ ಉತ್ಸಾಹವಿರಲಿಲ್ಲ. ಬೇಸರವಾಗಿ ರಾಜೀನಾಮೆ ಕೊಡಬೇಕೆಂಬ ಭಾವನೆ ಬೆಳೆಯತೊಡಗಿತು. ಇವರ ಈ ಬದಲಾವಣೆ ಮಹಾರಾಜರ ಗಮನಕ್ಕೆ ಬಂತು. ವಿಶ್ವೇಶ್ವರಯ್ಯನವರನ್ನು ಕರೆಸಿಕೊಂಡು ಕಾರಣ ಕೇಳಿದರು. ಅವರು ತಮ್ಮ ಮನಸ್ಸಿನ ನೋವನ್ನು ಹೇಳಿಕೊಂಡರು. ಮಹಾರಾಜರು ಅವರ ಯೋಜನೆಗೆ ಮಂಜೂರಾತಿ ಕೊಡುವುದಾಗಿ ಭರವಸೆ ನೀಡಿದರು.

ಹಲವು ರಾಜ್ಯಗಳ ಮೂಲಕ ಹರಿಯುವ ನದಿಗಳಿಗೆ ಅಣೆಕಟ್ಟು ಕಟ್ಟುವಾಗ ಎಲ್ಲಾ ರಾಜ್ಯಗಳ ಅನುಮತಿ ಅಗತ್ಯ. ಕಾವೇರಿಗೆ ಅಣೆಕಟ್ಟು ಕಟ್ಟಲು ಮದರಾಸು ಸರ್ಕಾರದ ಅನುಮತಿ ಪಡೆಯಬೇಕಿತ್ತು. ಮೆಟ್ಟೂರಿನಲ್ಲಿ ಕಾವೇರಿ ನದಿಗೆ ಅಣೆಕಟ್ಟು ಕಟ್ಟಲು ಮದರಾಸು ಸರ್ಕಾರ ನಿರ್ಧರಿಸಿತ್ತು. ಕನ್ನಂಬಾಡಿಯಲ್ಲಿ 130 ಅಡಿ ಎತ್ತರ, 8,600 ಅಡಿ ಉದ್ದದ ಕಟ್ಟೆ ಕಟ್ಟಿ 4,800 ಕೋಟಿ ಘನ ಅಡಿ ನೀರು ಸಂಗ್ರಹಿಸಿದರೆ ತನಗೆ ಸಾಕಷ್ಟು ನೀರು ಸಿಗದೆಂದು ಮದರಾಸು ಸರ್ಕಾರ ಆಕ್ಷೇಪಿಸಿತು. ವಿವಾದ ವೈಸ್‌ರಾಯ್ ಲಾರ್ಡ್ ಹಾರ್ಡಿಂಜರ ತೀರ್ಮಾನಕ್ಕೆ ಹೋಯಿತು. ಅವರಿಂದ ಅನುಮತಿ ದೊರೆತದ್ದು 80 ಅಡಿ ಎತ್ತರದ ಕಟ್ಟೆ ಕಟ್ಟಲು ಮಾತ್ರ. 1911ರಲ್ಲಿ ಅಡಿಪಾಯದ ಕಂದಕ ತೋಡುವ ಕೆಲಸ ಪ್ರಾರಂಭವಾಯಿತು. ಅನುಮತಿ ದೊರಕಿದ್ದು 80 ಅಡಿ ಎತ್ತರದ ಕಟ್ಟೆಗೆ. ಆದರೆ ವಿಶ್ವೇಶ್ವರಯ್ಯನವರು ಪ್ರಾರಂಭಿಸಿದ್ದು 125 ಅಡಿ ಎತ್ತರದ ಕಟ್ಟೆಗೆ ಅಗತ್ಯವಾದ 111 ಅಡಿ ಅಗಲದ ಅಡಿಪಾಯ. ವಿಶ್ವೇಶ್ವರಯ್ಯನವರಿಗೆ 125 ಅಡಿ ಎತ್ತರದ ಕಟ್ಟೆ ಕಟ್ಟಲು ಅನುಮತಿ ದೊರೆಯಬಹುದೆಂಬ ವಿಶ್ವಾಸ ಇದ್ದೇ ಇತ್ತು.

1912ರ ನವೆಂಬರ್‌ನಲ್ಲಿ ವಿಶ್ವೇಶ್ವರಯ್ಯನವರು ದಿವಾನರಾದರು. ಕಟ್ಟೆಯ ಕೆಲಸ ಮುಂದುವರಿಯುತ್ತಿತ್ತು. ಕಾವೇರಿ ನದಿಯಲ್ಲಿ ಭಯಂಕರ ಪ್ರವಾಹ. ಮಳೆಗಾಲ ಮುಗಿಯುವವರೆಗೆ ಕೆಲಸ ನಿಲ್ಲಿಸಬೇಕೆಂದು ಬಹಳ ಜನರ ಅಭಿಪ್ರಾಯ. ಸಕಾಲದಲ್ಲಿ ಕೆಲಸ ಮುಗಿಸಬೇಕೆಂಬ ಹಟ ವಿಶ್ವೇಶ್ವರಯ್ಯನವರಿಗೆ. ಹೆಚ್ಚು ಜನ ಕೆಲಸಗಾರರನ್ನು ನೇಮಿಸಿಕೊಂಡು ಕೆಲಸ ಮುಂದುವರೆಸುವಂತೆ ಆಜ್ಞಾಪಿಸಿದರು. ಚಿನ್ನದ ಗಣಿಯವರು ಸಕಾಲದಲ್ಲಿ ವಿದ್ಯುಚ್ಛಕ್ತಿ ಒದಗಿಸುವುದಾದರೆ ಪ್ರತಿ ಅಶ್ವ ಶಕ್ತಿಗೂ ಹೆಚ್ಚಿನ ಎರಡು ಪೌಂಡ್ ದರ ಹತ್ತು ವರ್ಷ ಕಾಲ ನೀಡುವುದಾಗಿ ತಿಳಿಸಿದರು. ಹಗಲೂ ರಾತ್ರಿ ಕೆಲಸ ನಡೆಯಿತು. ಮುಖ್ಯ ಇಂಜಿನಿಯರ್, ಮುಖ್ಯ ಪೋಲೀಸ್ ಅಧಿಕಾರಿ, ಜಿಲ್ಲಾಧಿಕಾರಿ ಎಲ್ಲಾ ಕಟ್ಟೆಯ ಬಳಿ ಬಿಡಾರ ಹೂಡುವಂತೆ ಆಜ್ಞಾಪಿಸಿದರು. ತಾವು ಪ್ರತಿದಿನವೂ ಅಲ್ಲಿಗೆ ಭೇಟಿ ನೀಡುತ್ತಿದ್ದರು. ಹೀಗೆ ಮೊದಲ ಹಂತದ ಕೆಲಸ ನಿಗದಿತ ವೇಳೆಗೆ ಪೂರ್ಣಗೊಂಡಿತು. ಶಿವನಸಮುದ್ರಕ್ಕೆ ಅಗತ್ಯವಾದ ನೀರು ಒದಗಿಸಿ, ಚಿನ್ನದ ಗಣಿಗೆ ವಿದ್ಯುಚ್ಛಕ್ತಿಯನ್ನು ಒದಗಿಸಿದರು. ಕೋಲಾರದ ಚಿನ್ನದ ಗಣಿಯ ಜಾನ್ ಟೇಲರ್ ಕಂಪೆನಿಯವರು ವಿಶ್ವೇಶ್ವರಯ್ಯನವರನ್ನು ಹೊಗಳಿ ಮಹಾರಾಜರಿಗೆ ಪತ್ರ ಬರೆದರು.

ಎರಡನೆಯ ಹಂತದ ಕೆಲಸ ಪ್ರಾರಂಭಿಸಲು ಮದರಾಸು ಸರ್ಕಾರ ಆಕ್ಷೇಪಣೆ ಎತ್ತಿತು. ಕೆಲಸ ಮುಂದುವರಿಯದಂತೆ ಭಾರತ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿತು. ವ್ಯಾಜ್ಯ ಬಗೆಹರಿಸಲು ಪಂಚಾಯತಿ ನೇಮಕ ವಾಯಿತು. ಮೈಸೂರು ಸರ್ಕಾರದ ಪರ ವಿಶ್ವೇಶ್ವರಯ್ಯನವರು, ಮದರಾಸು ಸರ್ಕಾರದ ಪರ ಸಿ. ಪಿ. ರಾಮಸ್ವಾಮಿ ಅಯ್ಯರವರು ವಾದ ಮಂಡಿಸಿದರು. ಪಂಚಾಯತಿಯು ಕನ್ನಂಬಾಡಿಯಿಂದ ಮದರಾಸಿಗೆ ಬಿಟ್ಟುಕೊಡಬೇಕಾದ ಪ್ರಮಾಣ ನಿರ್ಧರಿಸಿ 130 ಅಡಿ ಎತ್ತರದ ಕಟ್ಟೆ ಕಟ್ಟಲು ಅನುಮತಿ ನೀಡಿತು.

ಇಂಡಿಯಾ ಸರ್ಕಾರ ಇದಕ್ಕೆ ಒಪ್ಪಿಗೆ ನೀಡಿತು. ಮದರಾಸು ಸರ್ಕಾರ ಆಗಲೂ ಆಕ್ಷೇಪಣೆ ಎತ್ತಿತು. ಪಂಚಾಯತಿಯ ತೀರ್ಮಾನ ಒಪ್ಪಿಕೊಳ್ಳಲು

ನಿರಾಕರಿಸಿತು. ಲಂಡನ್ನಿನಲ್ಲಿರುವ ಇಂಡಿಯಾ ವಿಭಾಗದ ಕಾರ್ಯದರ್ಶಿಗೆ ಮನವಿ ಒಪ್ಪಿಸಿತು. ಎರಡೂ ಪಕ್ಷಗಳೂ ಮಧ್ಯಸ್ಥಗಾರರ ಸಹಾಯದಿಂದ ವ್ಯಾಜ್ಯ ಬಗೆಹರಿಸಿಕೊಳ್ಳಲು ಒಪ್ಪಿಕೊಂಡವು. ಮಧ್ಯಸ್ಥಿಕೆ ಬೇಡ, ಇಂಡಿಯಾ ಸರ್ಕಾರದ ಕಾರ್ಯದರ್ಶಿಗಳು ಎರಡು ಪಕ್ಷಗಳ ವಾದ ಕೇಳಿ ತೀರ್ಪು ಕೊಡಲಿ ಎಂದರು ವಿಶ್ವೇಶ್ವರಯ್ಯನವರು. ಆದರೆ ಮೈಸೂರು ಸರ್ಕಾರ ಮಧ್ಯಸ್ಥಿಕೆಗೆ ಒಪ್ಪಿಕೊಂಡಿತು. ಅಂತಿಮ ತೀರ್ಮಾನ ಅನೇಕ ಅಂಶಗಳಲ್ಲಿ ಮೈಸೂರಿಗೆ ಪ್ರತಿಕೂಲವಾಗಿತ್ತು. ಆದರೂ ಒಪ್ಪಿಕೊಳ್ಳ ಬೇಕಾಯಿತು. 1911ರಲ್ಲಿ ಪ್ರಾರಂಭವಾದ ಕಟ್ಟೆಯ ನಿರ್ಮಾಣ ಕಾರ್ಯ ಮುಗಿಯಲು ಇಪ್ಪತ್ತು ವರ್ಷ ಬೇಕಾಯಿತು.

ಕಟ್ಟೆಯ ನಿರ್ಮಾಣಕಾರ್ಯ ಪೂರ್ಣ ಆಗುವುದರ ಒಳಗೆ ವಿಶ್ವೇಶ್ವರಯ್ಯನವರು ದಿವಾನ್ ಪದವಿಯಿಂದ ನಿವೃತ್ತರಾದರು. ಮೈಸೂರಿನ ದಕ್ಷ ಇಂಜಿನಿಯರುಗಳು ಕೆಲಸ ಮುಂದುವರೆಸಿ ಯಶಸ್ವಿಯಾಗಿ ಮುಗಿಸಿದರು. ಕೃಷ್ಣರಾಜಸಾಗರದ ನಿರ್ಮಾಣಕ್ಕೆ ಆದ ವೆಚ್ಚ ಎರಡು ಕೋಟಿ ಐವತ್ತು ಲಕ್ಷ ರೂಪಾಯಿಗಳು. ಕಟ್ಟೆಯ ಉದ್ದ 8,600 ಅಡಿಗಳು. ಇದರ ಮೇಲೆ ವಾಹನ ಸಂಚಾರಕ್ಕೆ ಯೋಗ್ಯವಾದ ರಸ್ತೆ ಇದೆ. ತಳಪಾಯದಿಂದ ಅತಿ ಹೆಚ್ಚಿನ ಎತ್ತರ 140 ಅಡಿ. ಜಲಾಶಯದ ಅತಿ ಹೆಚ್ಚಿನ ಆಳ 124 ಅಡಿ. ಜಲಾಶಯದ ವಿಸ್ತೀರ್ಣ 50 ಚದರ ಮೈಲಿ. ಸುತ್ತಳತೆ 25 ಮೈಲಿ.

ಕೃಷ್ಣರಾಜಸಾಗರದ ನಿರ್ಮಾಣದಿಂದ 23,533 ಎಕರೆ ಜಮೀನಿನ 25 ಹಳ್ಳಿಗಳು ಮುಳುಗಡೆಯಾಗಿವೆ. ಈ ಗ್ರಾಮಗಳಲ್ಲಿ ವಾಸಿಸುತ್ತಿದ್ದ ಹತ್ತು ಸಾವಿರ ಕುಟುಂಬಗಳು ಮನೆ ಜಮೀನು ಕಳೆದುಕೊಂಡವು. ಈ ಎಲ್ಲಾ ಕುಟುಂಬಗಳಿಗೂ ಬೇರೆ ಸ್ಥಳದಲ್ಲಿ ವಸತಿ, ಬೇಸಾಯಕ್ಕೆ ಬೇಕಾದ ಜಮೀನು ಕೊಡಲಾಯಿತು. ಪರಿಹಾರಕ್ಕಾಗಿ 46,50,000 ರೂಪಾಯಿಗಳು ವೆಚ್ಚವಾದವು. ದೊರೆತ ಪರಿಹಾರ ತೃಪ್ತಿಕರವಾಗಿಲ್ಲ ಎಂದು ಯಾರೂ ನ್ಯಾಯಾಲಯದ ಮೊರೆ ಹೋಗಲಿಲ್ಲ.

ಕಟ್ಟೆ ನಿರ್ಮಾಣ ಆಗುವುದರ ಒಳಗಾಗಿ ಎರಡು ನಾಲೆಗಳು ಸಿದ್ಧವಾದವು. ಇವು 5,000 ಎಕರೆ ಭೂಮಿಗೆ ನೀರು ಒದಗಿಸುತ್ತವೆ.



ಕೃಷ್ಣರಾಜಸಾಗರ ಅಣೆಕಟ್ಟಿನ ಒಂದು ನೋಟ

ಮೇಲ್ದಂಡೆಯ ನಾಲೆಯನ್ನು ಸಿದ್ಧಪಡಿಸಬೇಕಿತ್ತು. ಅದು ಕಷ್ಟದ ಕೆಲಸ. ಮಹಾರಾಜರು ಮತ್ತೆ ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಂಡರು. ಅವರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿ ರಚಿತವಾಯಿತು. ಮೂರು ಹಂತಗಳಲ್ಲಿ ನಾಲೆ ನಿರ್ಮಿಸಲು ತೀರ್ಮಾನಿಸಲಾಯಿತು. ಈ ನಾಲೆಯಿಂದ ಎಂಟುನೂರು–ಒಂಭೈನೂರು ಚದರ ಮೈಲಿ ವಿಸ್ತೀರ್ಣದ ಪ್ರದೇಶ ನೀರಾವರಿ ಆಗಬಹುದೆಂದು ಅಂದಾಜು ಮಾಡಲಾಯಿತು.

ಎರಡನೆಯ ಹಂತದ ನಾಲೆ 9,680 ಅಡಿ ಉದ್ದದ ಸುರಂಗಗಳಲ್ಲಿ ಹರಿದು ಹೊರಬರುತ್ತದೆ. ಈಗ ಅದಕ್ಕೆ ವಿಶ್ವೇಶ್ವರಯ್ಯ ನಾಲೆ ಎಂದೇ ಹೆಸರಿಡಲಾಗಿದೆ. ಈ ನಾಲೆಯಿಂದ ಬೊಕ್ಕ ಬರಡು ಪ್ರದೇಶ ನಕ್ಕು ನಲಿಯುವ ನಾಡಾಗಿ ಶ್ರೀಮಂತವಾಗಿದೆ.

ಜಗತ್ಪ್ರಸಿದ್ಧ ಬೃಂದಾವನ ಕೃಷ್ಣರಾಜಸಾಗರದ ಕೆಳಭಾಗದಲ್ಲಿದೆ. ನಯನಮನೋಹರ ಕಾರಂಜಿಗಳಿಂದ, ಬಣ್ಣಬಣ್ಣದ ದೀಪಾಲಂಕಾರ

ಗಳಿಂದ, ಹೂದೋಟದಿಂದ ಲಕ್ಷಾಂತರ ಪ್ರವಾಸಿಗಳನ್ನು ಇದು ಆಕರ್ಷಿಸುತ್ತಿದೆ.

## 10. ಕೃಷಿಯ ಸ್ಥಾನ

ಭಾರತದಲ್ಲಿ ಪ್ರತಿ ನಾಲ್ವರಲ್ಲಿ ಮೂವರು ವ್ಯವಸಾಯವನ್ನು ಅವಲಂಬಿಸಿರುತ್ತಾರೆ. ರೈತ ನಾಡಿನ ಬೆನ್ನೆಲುಬು. ಮಳೆ, ಬೆಳೆ, ಅವನ ಜೀವನಾಧಾರ. ನೀರಿಗೆ ಅಗತ್ಯ ಮಳೆ. ಮಳೆಯ ನೀರು ಹರಿಯುವ ನದಿಯಲ್ಲಿ ಹರಿದು ಹೋಗುತ್ತದೆ. ಮಳೆ ಬಂದಾಗ ನೀರು ಸಂಗ್ರಹಿಸಿ ಇಡುವುದು ಬುದ್ಧಿವಂತಿಕೆಯ ಲಕ್ಷಣ. ಇದಕ್ಕಾಗಿ ಕೆರೆ, ಕುಂಟೆಗಳು, ಜಲಾಶಯಗಳು ನಿರ್ಮಿತವಾದವು.

ಆದರೂ ನಮ್ಮ ಗ್ರಾಮಗಳು ಬಡತನದ ಬವಣೆಯಿಂದ ಪರಿತಪಿಸುತ್ತಿವೆ. ವಿಶ್ವೇಶ್ವರಯ್ಯನವರ ದೃಷ್ಟಿಯಲ್ಲಿ ಇದಕ್ಕೆ ಮುಖ್ಯ ಕಾರಣಗಳು ಹಲವು. ಕೃಷಿಯನ್ನೇ ಅವಲಂಬಿಸಿರುವ ಜನರ ಸಂಖ್ಯೆ ಅಪಾರವಾಗಿ ಬೆಳೆಯುತ್ತಿರುವುದು. ಸಣ್ಣ ಸಣ್ಣ ಹಿಡುವಳಿ. ಅಜ್ಜ ನೆಟ್ಟ ಆಲದ ಮರದ ಪುರಾತನ ಪದ್ಧತಿಯನ್ನೇ ಅನುಸರಿಸುತ್ತಿರುವುದು. ಹೆಂಗಸರಿಂದ ಸಾಕಷ್ಟು ಯೋಗ್ಯ ಕೆಲಸ ಪಡೆಯದಿರುವುದು.

ಗ್ರಾಮಗಳ ಅಭಿವೃದ್ಧಿಗೆ ಈಗಿನ ವಾತಾವರಣ ಬದಲಾಗಬೇಕು. ಜನರಲ್ಲಿ ಆತ್ಮವಿಶ್ವಾಸ, ನಂಬಿಕೆ, ಸಹಕಾರ ಮನೋಧರ್ಮ ಬೆಳೆಯಬೇಕು. ಇಷ್ಟಾದರೆ ನೂರು ಮುಖಗಳಲ್ಲಿ ಪ್ರಗತಿಯ ಪ್ರವಾಹ ಹರಿಯುವುದರಲ್ಲಿ ಸಂಶಯವಿಲ್ಲ. ಕ್ಷಾಮ ತಲೆದೋರದಂತೆ ಮಾಡಬೇಕಾದುದು ಮೊದಲ ಕರ್ತವ್ಯ. ಪ್ರತಿಯೊಂದು ಕುಟುಂಬವೂ ತಾನು ಬೆಳೆದ ದವಸದಲ್ಲಿ ಎರಡು ವರ್ಷಗಳಿಗೆ ಸಾಕಾಗುವಷ್ಟು ಧಾನ್ಯವನ್ನು ಕಣಜದಲ್ಲಿ ತುಂಬಿಡಬೇಕು. ಪರಾವಲಂಬಿಯಾಗಬಾರದು. ಆದರೆ ಸಣ್ಣ ತಾಕುಗಳ ಕೃಷಿಕ ಬೆಳೆಯುವುದು ಅವನಿಗೇ ಸಾಲದು. ಒಂದು ವರ್ಷಕ್ಕೂ ಬಾರದು. ಅಂಥವನು ಏನು ತಾನೆ ಕೂಡಿಡಬಲ್ಲ? ವಿಶ್ವೇಶ್ವರಯ್ಯನವರು

ಇದನ್ನು ಅರಿಯದವರಲ್ಲ. ಇಂಥ ಬಡ ಕುಟುಂಬಗಳಿಗೂ ಮಿತವ್ಯಯ ಕಲಿಸಿಕೊಡಬೇಕು. ಕೈಗಾರಿಕೆ, ವಾಣಿಜ್ಯ, ವ್ಯಾಪಾರ ಇವುಗಳಲ್ಲಿ ಅಧಿಕ ಆಸಕ್ತಿ ವಹಿಸಬೇಕು. ಆಗ ಕ್ಷಾಮದ ವಿರುದ್ಧ ಸಮರ ಯಶಸ್ವಿ ಆದೀತು.

ಆಧುನಿಕ ನಾಗರಿಕತೆ ಕೈಗಾರಿಕೋದ್ಯಮಗಳನ್ನು ಅವಲಂಬಿಸಿರುತ್ತದೆ. ನಾಗಾಲೋಟದಿಂದ ಮುಂದುವರಿಯುತ್ತಿರುವ ದೇಶಗಳೊಡನೆ ಪೈಪೋಟಿ ಮಾಡಲು ನಮ್ಮ ದೇಶವೂ ಕೈಗಾರಿಕೋದ್ಯಮಗಳಲ್ಲಿ ಹೆಚ್ಚು ಹೆಚ್ಚಾಗಿ ತೊಡಗಬೇಕು. ಬಹುಸಂಖ್ಯಾತರು ಬೇಸಾಯವನ್ನೇ ನಂಬಿ ಕೊಂಡು ಬಾಳುವುದು ನಾಗರಿಕತೆಯ ಲಕ್ಷಣವಲ್ಲ. ಭಾರತವು ನಾಗರಿಕತೆಯ ಈ ಲಕ್ಷಣವನ್ನು ಇನ್ನೂ ಮನದಟ್ಟು ಮಾಡಿಕೊಂಡಿಲ್ಲ. ಇದು ವಿಶ್ವೇಶ್ವರಯ್ಯನವರ ಖಚಿತಾಭಿಪ್ರಾಯ.

ವ್ಯವಸಾಯವನ್ನೇ ಜೀವನಾಧಾರವಾಗಿ ಮಾಡಿಕೊಳ್ಳುತ್ತಿರುವವರ ಪ್ರಮಾಣ ಬೆಳೆಯುತ್ತಿದೆ. ನಮ್ಮ ಕುಟುಂಬ ಪದ್ಧತಿಯೂ ಇದಕ್ಕೊಂದು ಕಾರಣ. ಅಪ್ಪನ ಆಸ್ತಿ ಮಕ್ಕಳು, ಮೊಮ್ಮಕ್ಕಳಿಗೆ ಭಾಗವಾಗುತ್ತಾ ಭೂ ಆಸ್ತಿ, ಸಣ್ಣ ತಾಕುಗಳಾಗಿ ಒಡೆಯುತ್ತದೆ. ಐದು ಜನರಿಗೆ ಅನ್ನ ನೀಡುತ್ತಿದ್ದ ಭೂತಾಯಿ ಹತ್ತು ಹದಿನೈದು ಜನರ ಉದರ ಪೋಷಣೆ ಮಾಡ ಬೇಕಾಗುತ್ತದೆ.

ಕೃಷಿಯ ಹೀನ ಸ್ಥಿತಿಗೆ ಅಪಾರ ಅಜ್ಞಾನ ಮೂಲ ಕಾರಣ. ಇದರ ನಿವಾರಣೆಗೆ ವಿದ್ಯೆ ಅಗತ್ಯ. ವಿದ್ಯೆ ಇಲ್ಲದವನು ಆಧುನಿಕ ವೈಜ್ಞಾನಿಕ ಪದ್ಧತಿ ಅರಿಯಲು, ಅನುಸರಿಸಲು ಅಸಮರ್ಥ. ಹಳೆಯ ಪದ್ಧತಿಯ ಅಂಧಾನುಕರಣೆ ಸಾಗುತ್ತದೆ. ಕಾಲನಿಯಮವಿಲ್ಲ. ಕಾಲಕ್ಕೆ ಬೆಲೆ ಇಲ್ಲ. ಸೂರ್ಯೋದಯ, ಸೂರ್ಯಾಸ್ತ ಇವನ ಗಡಿಯಾರ. ಶಿಸ್ತಿನ ಅಭಾವ. ಹಣದ ಕೊರತೆ. ಹೊರಲಾಗದ ಸಾಲದ ಹೊರೆ. ಅಗತ್ಯವಿದ್ದಾಗ ದೊರೆಯದು ಧನ ಸಹಾಯ. ಒಂದಕ್ಕೆ ನಾಲ್ಕರಷ್ಟು ಬಡ್ಡಿ ತೆತ್ತು ಸಾಲ ಮಾಡಿಕೊಂಡು ಋಣ ಬಾಧೆಗೆ ಸಿಲುಕುತ್ತಾನೆ.

ನಮ್ಮ ಗ್ರಾಮಗಳು ವ್ಯವಸ್ಥಿತವಾಗಿ ಬೆಳೆದಿಲ್ಲ. ಗುಡಿಸಲು, ಮನೆ, ಸಾಲಾಗಿ, ನೀಟಾಗಿ ರಚಿತವಾಗಿರುವುದಿಲ್ಲ. ಒಂದು ಹಿಂದು ಇನ್ನೊಂದು

ಮುಂದು. ವಾಹನ ಸಂಚಾರಕ್ಕೆ ಅನುಕೂಲವಿಲ್ಲದ ಕಿರಿದಾದ ಬೀದಿಗಳು, ಒಪ್ಪವಿಲ್ಲದ ಓಣಿಗಳು. ಮನೆಯ ಕಸ, ಗಂಜಲ, ರೊಚ್ಚು ಎಲ್ಲಾ ಹರಿಯುವುದು ಬೀದಿಗೆ. ಬೀದಿಯ ಕಸ ಗುಡಿಸುವ, ಗ್ರಾಮ ಸಾರ ಹರಿದುಹೋಗುವ ಮೋರಿಯ ವ್ಯವಸ್ಥೆ ಇಲ್ಲ. ಕುಡಿಯುವ ನೀರಿನ ಕೊರತೆ, ಮನೆಯ ಪಕ್ಕದಲ್ಲೇ ಗೊಬ್ಬರದ ಗುಂಡಿ. ಬಿಡುವಿನ ವೇಳೆಯಲ್ಲಿ ಹರಟೆ, ಹಲವು ಬಗೆಯ ಜೂಜುಗಳಲ್ಲಿ ಕಾಲ ಕಳೆಯುವ ಜನ. ವಿರಾಮವನ್ನು ಉಪಯುಕ್ತವಾಗಿ ಬಳಸಿಕೊಳ್ಳುವ ಮಾರ್ಗ ಅರಿಯರು.

ಕೃಷಿ ಒಂದನ್ನೇ ನಂಬಿ ಬದುಕುವ ನಾಡು ಶ್ರೀಮಂತವಾಗದು. ಬೇಸಾಯ, ಕೈಗಾರಿಕೆ ಎರಡೂ ಕೂಡಿ ಬಾಳಬೇಕು, ಬೆಳೆಯಬೇಕು. ಅರಣ್ಯದಲ್ಲಿ ಬೆಳೆಯುವ ಉತ್ತಮ ಜಾತಿಯ ಮರಗಳನ್ನು ಕಡಿದು ಸೌದೆಗೆ ಬಳಸುವುದಕ್ಕಿಂತ ಮೇಜು, ಕುರ್ಚಿ, ಬೆಂಚು ಮಾಡುವುದು ಲಾಭ ದಾಯಕ. ಒಂದು ಮರ ಕಡಿದರೆ ಅದರ ಸ್ಥಾನದಲ್ಲಿ ಎರಡು ಬೆಳೆಸಬೇಕು. ಪ್ರತಿ ಕುಟುಂಬವೂ ಉಪಕಸುಬನ್ನು ಅನುಷ್ಠಾನಕ್ಕೆ ತರಬೇಕು. ಹೈನು ಗಾರಿಕೆ, ಕೋಳಿ ಸಾಕಣೆ ಇವುಗಳನ್ನು ಅಭಿವೃದ್ಧಿಪಡಿಸಿಕೊಳ್ಳಬೇಕು. ಹಳ್ಳಿಗಳು ಕೆರೆಯ ನಾಲೆಯ ಹೂಳು ತೆಗೆಯುವುದು, ಗ್ರಾಮ ನೈರ್ಮಲ್ಯ, ದೇವಾಲಯ ಮಂಟಪಗಳ ದುರಸ್ತಿ ಇವೇ ಮೊದಲಾದ ಸಾಮೂಹಿಕ ಕಾರ್ಯ ಕೈಗೊಳ್ಳಬೇಕು. ಇದರಿಂದ ಪರಸ್ಪರ ಐಕ್ಯತೆ ಬೆಳೆಯುತ್ತದೆ.

ಗ್ರಾಮ ಹೇಗಿರಬೇಕು? ಇದರ ಚಿತ್ರ ವಿಶ್ವೇಶ್ವರಯ್ಯನವರು ಕೊಟ್ಟಿ ರುತ್ತಾರೆ. 'ಮಾದರಿ ಗ್ರಾಮ' ಪದ ಅವರು ಬಳಸಲಿಲ್ಲ. ಅವರು ಬಯಸುತ್ತಿದ್ದುದು 'ಆತ್ಮಗೌರವ'ದ ಗ್ರಾಮ. ಪರಾವಲಂಬಿಯಾಗದೆ ಸ್ವಪರಿಪೂರ್ಣವಾಗಿ ಬಾಳುತ್ತಿದ್ದೇವೆ ಎಂದು ಹೆಮ್ಮೆಪಡುವ ಗ್ರಾಮ. ಗ್ರಾಮದ ನೂರರಲ್ಲಿ ಹತ್ತು ತರುಣರಾದರೂ ಶಾಲೆಗಳಲ್ಲಿ ಶಿಕ್ಷಣ ಪಡೆಯುತ್ತಿರಬೇಕು. ಕೂಲಿ ಕೊಡಲಾಗದೆ ಮಕ್ಕಳನ್ನು ದನ ಕುರಿ ಕಾಯುವುದಕ್ಕೆ ಬಳಸಿಕೊಳ್ಳುತ್ತಾರೆ. ತೋಟ ಕಾಯಲು, ಕಳೆ ಕೀಳಲು, ಹೆಂಗಸರು ಮಕ್ಕಳನ್ನು ಉಪಯೋಗಿಸಿಕೊಳ್ಳುತ್ತಾರೆ. ಶಾಲೆಗೆ ಹೋಗದ ಮಕ್ಕಳನ್ನು ಕೆಲಸಕ್ಕೆ ತೊಡಗಿಸಿರುತ್ತಾರೆ. ಇಂಥವರಿಗೆ ವಯಸ್ಕರ ಶಿಕ್ಷಣದ

ವ್ಯವಸ್ಥೆ ಆಗಬೇಕು. ಪ್ರತಿ ಗ್ರಾಮದಲ್ಲೂ ಕಮ್ಮಾರ, ಚಮ್ಮಾರ, ಬಡಗಿ ಇರಬೇಕು. ಗಾಡಿಯ ಗಾಲಿ ಗ್ರಾಮದಲ್ಲೇ ಆಗಬೇಕು. ಪಾತ್ರೆಗಳ ಕಲಾಯಿ ರಿಪೇರಿ ಕಲಿತಿರಬೇಕು. ಪಾದರಕ್ಷೆಗಳು ಹಳ್ಳಿಯಲ್ಲೇ ತಯಾರಾಗಬೇಕು. ಗ್ರಾಮದ ವಾರ್ಷಿಕ ಉತ್ಪಾದನಾ ಸಾಮರ್ಥ್ಯ ಅಳೆಯಬೇಕು. ಸರಾಸರಿ ತಲಾ ಮೂವತ್ಮೂರು ರೂಪಾಯಿ ವರಮಾನ ಕೊಡಲಾರದ ಗ್ರಾಮ ಆರ್ಥಿಕವಾಗಿ ಸುರಕ್ಷಿತವಲ್ಲ. ವರ್ಷಾಂತ್ಯದಲ್ಲಿ ಪ್ರತಿ ಗ್ರಾಮವೂ ಜನನ ಮರಣ ಸಂಖ್ಯೆ, ಜನಸಂಖ್ಯೆ, ದನಗಳ ಸಂಖ್ಯೆ, ಪ್ರಮುಖ ಕೈಗಾರಿಕೆ, ಗ್ರಾಮದ ಹೆಸರು, ವಿಸ್ತೀರ್ಣ ಇವುಗಳನ್ನು ಫಲಕದ ಮೇಲೆ ಬರೆಯಿಸಿ ಗ್ರಾಮದ ಹೊರಗೆ ಪ್ರದರ್ಶಿಸಬೇಕು. ಕನಿಷ್ಠ ಎರಡು ವರ್ತಮಾನ ಪತ್ರಿಕೆಗಳನ್ನು ತರಿಸಿಕೊಂಡು ಪ್ರಪಂಚದ ಆಗುಹೋಗುಗಳ ಅರಿವು ಮಾಡಿಕೊಳ್ಳಬೇಕು. ಇಂಥ ಆತ್ಮ ಗೌರವದ ಗ್ರಾಮದ ಕಡೆ ಜನರ ಗಮನ ಸೆಳೆಯಲು 1912ರಲ್ಲಿ ಒಂದು ಯೋಜನೆಯನ್ನೂ ಸಿದ್ಧಗೊಳಿಸಿದರು. ಗ್ರಾಮಗಳಲ್ಲಿ ಗ್ರಾಮ ಸಮಿತಿ, ವ್ಯವಸಾಯಾಭಿವೃದ್ಧಿ ಸಮಿತಿ ಸ್ಥಾಪಿತ ವಾದವು. ಗ್ರಾಮದ ಕೆಲಸಗಳನ್ನು ಆರು ಮುಖ್ಯ ಭಾಗಗಳಾಗಿ ವಿಂಗಡಿಸಿದರು. ವ್ಯವಸಾಯ, ಉಪಕಸುಬು, ಶಿಕ್ಷಣ, ಕೈಗಾರಿಕೆ, ವ್ಯಾಪರೋದ್ಯಮ. ಇವುಗಳಿಗೆ ಪ್ರತ್ಯೇಕ ಸಮಿತಿಗಳು. ಆಡಳಿತ ನಿರ್ವಹಣೆ, ಶಾಂತಿ ಪಾಲನೆ ಗ್ರಾಮ ಪಂಚಾಯತಿಯ ಹೊಣೆ.

ವ್ಯವಸಾಯ ಇಲಾಖೆ ಅಸ್ತಿತ್ವಕ್ಕೆ ಬಂತು. ವೈಜ್ಞಾನಿಕ ಬೇಸಾಯ ಪದ್ಧತಿ, ರಸಗೊಬ್ಬರದ ಬಳಕೆ ಇವರ ಕಾಲದಲ್ಲಿ ಬಂತು. ಆಧುನಿಕ ಸಂಶೋಧನೆ ಗಳನ್ನು ಪ್ರಾಯೋಗಿಕವಾಗಿ ಆಚರಣೆಗೆ ತರಲು ಹೆಬ್ಬಾಳದಲ್ಲಿ ಪರೀಕ್ಷಣ ಕ್ಷೇತ್ರ ಸ್ಥಾಪಿತವಾಯಿತು. ರೋಗರಹಿತ ಬೀಜ ಉತ್ಪಾದಿಸಿ ರೈತರಿಗೆ ಒದಗಿಸುವುದು, ರೈತರ ಜಮೀನಿನಲ್ಲಿಯೇ ಪ್ರಯೋಗ ನಡೆಸುವುದು, ಸುಧಾರಿತ ವ್ಯವಸಾಯ ಉಪಕರಣ ಬಳಸುವುದು, ಕಾಡು ಮತ್ತು ತೋಪು ಬೆಳೆಸುವುದು, ಮುಂತಾದ ಕಾರ್ಯಕ್ರಮಗಳನ್ನು ಹಾಕಿಕೊಟ್ಟರು.

ಬಾಳೆಹೊನ್ನೂರಿನ ಕಾಫಿ ಪ್ರಯೋಗ ಕ್ಷೇತ್ರವನ್ನು ವಿಸ್ತರಿಸಿ ಅಭಿವೃದ್ಧಿ ಗೊಳಿಸಲಾಯಿತು. ಮೈಸೂರಿನ ಸಮೀಪದ ರಾಯನಕೆರೆ ಉತ್ತಮ

ರಾಸುಗಳಿಗೆ ಮೀಸಲಾಯಿತು. ಸೇಬು, ಮಾವು, ತೆಂಗು, ಕಾಫಿ ತೋಟಗಳ ಅಭಿವೃದ್ಧಿಗೆ ವಿಶೇಷ ಪ್ರೋತ್ಸಾಹ ನೀಡಲಾಯಿತು. ಕೆರೆಗಳ ನೀರು ಪೋಲಾಗದಂತೆ, ಎಲ್ಲರಿಗೂ ಸಮನಾಗಿ ದೊರೆಯುವಂತೆ ನೋಡಿ ಕೊಳ್ಳುವ ಜವಾಬ್ದಾರಿಯನ್ನು ಗ್ರಾಮ ಪಂಚಾಯತಿಗಳಿಗೆ ವಹಿಸಿಕೊಡ ಲಾಯಿತು. ಎರಡು ವರ್ಷಗಳಲ್ಲಿ 13,360 ಗ್ರಾಮಗಳಲ್ಲಿ 7.745 ಗ್ರಾಮ ಸಮಿತಿಗಳಾದವು. ಇದರಿಂದ ನೂರರಲ್ಲಿ 79 ಗ್ರಾಮಗಳು ಸಮಿತಿಯ ವ್ಯಾಪ್ತಿಗೆ ಒಳಗಾದವು. ಮೂರನೆಯ ವರ್ಷಕ್ಕೆ ಇದು 8,171 ಆಯಿತು. ಹಳ್ಳಿಯವರಿಗೆ ಹಣ ಕೊಡಲು ಸಾಧ್ಯವಾಗದಿರಬಹುದು. ಆದರೆ ಗ್ರಾಮದ ಕೆರೆ, ಕುಂಟೆ, ನಾಲೆ, ಬಾವಿ, ರಸ್ತೆ ಇವುಗಳನ್ನು ಉತ್ತಮ ಸ್ಥಿತಿಯಲ್ಲಿರಿಸಲು ಶ್ರಮದಾನ ಮಾಡಬಹುದು. ಧನಸಹಾಯ ನೀಡ ಲಾರದ ಕುಟುಂಬಗಳು ವಾರದಲ್ಲಿ ಅರ್ಧ ದಿನ ಸಾರ್ವಜನಿಕ ಸೇವೆಗೆ ಶ್ರಮಿಸಬೇಕು ಎಂದರು ವಿಶ್ವೇಶ್ವರಯ್ಯನವರು. ಅರ್ಧ ದಿನದ ಶ್ರಮದಾನ ನೀಡಲು ಒಪ್ಪಿದ ಗ್ರಾಮಗಳ ಸಂಖ್ಯೆ 1914ರಲ್ಲಿ 6,126 ಆಗಿತ್ತು.

ಕೃಷಿಯೂ ಒಂದು ವಿಜ್ಞಾನ. ವೈಜ್ಞಾನಿಕವಾಗಿ ವ್ಯವಸಾಯ ಮಾಡುವುದರಿಂದ ಒಂದಕ್ಕೆ ನಾಲ್ಕರಷ್ಟು ಬೆಳೆಯಬಹುದು. ಕೃಷಿ ಒಂದರಿಂದಲೇ ದೇಶ ಉದ್ಧಾರವಾಗದು ಎಂದು ಎಚ್ಚರಿಸುತ್ತಿದ್ದ ವಿಶ್ವೇಶ್ವರಯ್ಯನವರು ಕೃಷಿಯ ಉಪಾಂಗಗಳ ಬೆಳವಣಿಗೆಯಲ್ಲಿ ಆಸಕ್ತಿ ವಹಿಸಿದರು. ಚನ್ನಪಟ್ಟಣದಲ್ಲಿ ರೇಷ್ಮೆ ಫಾರಂ ಸ್ಥಾಪಿಸಿದರು. ಇದಕ್ಕಾಗಿ ಇಟಲಿಯಿಂದ ವಾಷಿಂಗ್‌ಟನ್ ಮಾರಿ ಎಂಬ ತಜ್ಞರನ್ನು ಬರಮಾಡಿ ಕೊಂಡಿದ್ದರು.

ಹೈನುಗಾರಿಕೆ, ಕುರಿ, ಕೋಳಿ ಇವನ್ನು ವೈಜ್ಞಾನಿಕವಾಗಿ ಅಭಿವೃದ್ಧಿ ಗೊಳಿಸಲು ಡೇವಿಸನ್ ಎಂಬ ತಜ್ಞನ ನೆರವು ಪಡೆದರು. ಆಸ್ಟ್ರೇಲಿಯಾ ದಿಂದ ಡಂಬ್ರ ಮತ್ತು ಮೆರಿನೊ ಟಗರು ಕುರಿಗಳನ್ನು ತರಿಸಿದರು. ಬೆಂಗಳೂರಿನ ಸಮೀಪದ ಗೊಟ್ಟಗೆರೆ ಮತ್ತು ಹೆಸರುಘಟ್ಟದಲ್ಲಿ ಕುರಿ ಮತ್ತು ದನಗಳ ತಳಿ ಅಭಿವೃದ್ಧಿಪಡಿಸುವ ಕ್ರಮ ಕೈಗೊಳ್ಳಲಾಯಿತು. ಬೆಂಗಳೂರು ಸುತ್ತಮುತ್ತ ಹಣ್ಣು - ಹಂಪಲು, ತರಕಾರಿ ಬೆಳೆಯುವ ಯೋಜನೆಯನ್ನು ಜಾರಿಗೆ ತಂದರು.

ಸ್ವಾವಲಂಬನೆ, ಆತ್ಮಗೌರವ, ಆತ್ಮಸ್ಥೈರ್ಯಗಳನ್ನು ನಮ್ಮ ಜನರು ಬೆಳೆಸಿಕೊಳ್ಳಬೇಕು, ಎಲ್ಲಕ್ಕೂ ಸರ್ಕಾರದತ್ತ ಕೈಚಾಚುವ ಪ್ರವೃತ್ತಿ ಬಿಡಬೇಕು ಎಂಬುದು ಅವರ ಅಭಿಲಾಷೆ. ಇದಕ್ಕೆ ಸಹಾಯವಾಗುವಂತೆ ಸಹಕಾರ ಸಂಘ, ಗ್ರಾಮ ಸಮಿತಿ, ವ್ಯವಸಾಯಾಭಿವೃದ್ಧಿ ಸಮಿತಿ ಸ್ಥಾಪಿಸಿದರು.

ಪ್ರಕೃತಿಯ ಕೃಪೆಗೆ ಪಾತ್ರವಾದ ಪ್ರದೇಶ ಮಲೆನಾಡು. ಅದು ಜಲಸಮೃದ್ಧವಾಗಿ, ಫಲವದ್ಭರಿತವಾಗಿ, ಜಲಪಾತ, ಕಾಡುಮೇಡುಗಳಿಂದ ಕೂಡಿದ ಪ್ರದೇಶ. ಆದರೆ, ಭಯಂಕರ ಮಲೇರಿಯಾ ರೋಗ ಪೀಡಿತವಾದುದು. ಅಧಿಕಾರಿಗಳು ಅಲ್ಲಿಗೆ ಹೋಗಲು ಹೆದರುತ್ತಿದ್ದರು. ಅದು ಅಭಿವೃದ್ಧಿಯ ದೃಷ್ಟಿಯಿಂದ ಉಪೇಕ್ಷಿತವಾಗಿತ್ತು. ಅಲ್ಲಿನ ನಿಸರ್ಗದ ಕೊಡುಗೆ ಬಳಸಿಕೊಳ್ಳಲು 1914ರಲ್ಲಿ ಮಲೆನಾಡು ಅಭಿವೃದ್ಧಿ ಸಮಿತಿ ಸ್ಥಾಪಿಸಿದರು. ಗೇರುಸೊಪ್ಪೆ (ಜೋಗ್) ಜಲಪಾತದಿಂದ ವಿದ್ಯುಚ್ಛಕ್ತಿ ಉತ್ಪಾದಿಸುವ ಸಮೀಕ್ಷೆ ನಡೆಯಿತು.

1949ರಲ್ಲಿ ವಿಶ್ವೇಶ್ವರಯ್ಯನವರು ಗ್ರಾಮ ಔದ್ಯೋಗೀಕರಣದ ಯೋಜನೆಯೊಂದನ್ನು ತಯಾರಿಸಿ ಭಾರತ ಸರ್ಕಾರದ ಅನುಮೋದನೆಗೆ ಒಪ್ಪಿಸಿದರು. ಕೇಂದ್ರ ಸರ್ಕಾರ ಇದನ್ನು ಅಚ್ಚುಹಾಕಿಸಿ ರಾಜ್ಯ ಸರ್ಕಾರಗಳಿಗೆ ಕಳಿಸಿತು. ಸರ್ಕಾರ 1951ರಲ್ಲಿ ಈ ಯೋಜನೆಯನ್ನು ಕಾರ್ಯಗತ ಮಾಡಲು ಸೂಕ್ತ ಕ್ರಮ ಕೈಗೊಂಡಿತು.

ಒದಗಬಹುದಾದ ಬಂಡವಾಳ ಮತ್ತು ಆಯಾ ಪ್ರದೇಶಗಳಿಗೆ ಹೊಂದಿಕೊಳ್ಳುವಂತೆ ಕೈಗಾರಿಕೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಿರುತ್ತಾರೆ. ಮೊದಲ ಶ್ರೇಣಿಯದು ಮೂಲ ಅಥವಾ ದೊಡ್ಡ ಕೈಗಾರಿಕೆ; ಎರಡನೆಯದು ಮಧ್ಯಮ ಶ್ರೇಣಿಯದು; ಮೂರನೆಯದು ಸಣ್ಣ ಅಥವಾ ಗ್ರಾಮೋದ್ಯೋಗ. ಗಣಿಯಿಂದ ಅದಿರು ತೆಗೆದು ಲೋಹವಾಗಿ ಪರಿವರ್ತಿಸುವುದು, ಕಬ್ಬಿಣ, ಉಕ್ಕು ತಯಾರಿಕೆ, ಯಂತ್ರಗಳು, ರೈಲುಗಾಡಿ, ರಾಸಾಯನಿಕ ವಸ್ತುಗಳು ಮುಂತಾದವು ಮೂಲ ಕೈಗಾರಿಕೆಯ ವರ್ಗದಲ್ಲಿ ಸೇರುತ್ತವೆ. ಮೂಲ ಉದ್ಯಮಗಳಿಗೆ ಅಧಿಕ ಹಣ,

ಅರಿತ, ನುರಿತ ಮಾರ್ಗದರ್ಶನ, ಮೇಲ್ವಿಚಾರಣೆ, ಸರ್ಕಾರದ ಸಹಾಯ ಅಗತ್ಯ.

ಕಬ್ಬಿಣ ಕರಗಿಸುವ ಕುಲುಮೆ, ಉಕ್ಕಿನ ಸಾಮಾನು, ಲೋಹದ ಪದಾರ್ಥಗಳು, ಕಾಗದ, ಸಕ್ಕರೆ, ಬೆಂಕಿಕಡ್ಡಿ, ಸಾಬೂನು, ಗಡಿಯಾರ ಇತ್ಯಾದಿ ಮಧ್ಯಮ ವರ್ಗಕ್ಕೆ ಸೇರಿದವು. ಮೂರನೆಯ ವರ್ಗಕ್ಕೆ ಸೇರಿದ್ದು ಗ್ರಾಮೋದ್ಯೋಗ ಮತ್ತು ಗೃಹಕೈಗಾರಿಕೆ. ಸ್ಥಳೀಯ ಸಂಸ್ಥೆ, ಗ್ರಾಮ ಪಂಚಾಯತಿ ಮತ್ತು ಖಾಸಗಿ ವ್ಯಕ್ತಿಗಳ ಸಹಾಯದಿಂದ ಇದನ್ನು ಹೆಚ್ಚಿಸಬಹುದು. ನೂಲುವುದು, ಕೈಮಗ್ಗ, ನೇಯ್ಗೆ, ಗಿರಣಿಗಳು, ಬೀಡಿ, ಗಂಧದ ಕಡ್ಡಿ ತಯಾರಿ ಇತ್ಯಾದಿ ಈ ವರ್ಗಕ್ಕೆ ಸೇರಿದವು. ಈ ಶ್ರೇಣಿಯ ಉದ್ಯಮಕ್ಕೆ ಅಧಿಕ ಬಂಡವಾಳ ಅನವಶ್ಯ. ಮೇಲೆ ಹೇಳಿದ ಅನೇಕ ಸಾಮಗ್ರಿಗಳನ್ನು ಭಾರತೀಯರು ಉತ್ಪಾದಿಸಲಾರರು ಎಂಬ ಭಾವನೆ ಬಲವಾಗಿತ್ತು ಮತ್ತು ಈ ಸಾಮಗ್ರಿಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತಿದ್ದ ಕಾಲ ಅದು. ಇಂಥ ನಿರುತ್ಸಾಹದ ವಾತಾವರಣದಲ್ಲಿ ಭಾರತೀಯರು ಬುದ್ಧಿ ಚಾತುರ್ಯದಲ್ಲಿ ಯಾರಿಗೂ ಕಡಿಮೆ ಇಲ್ಲ; ತಕ್ಕ ಶಿಕ್ಷಣ, ಯೋಗ್ಯ ವಾತಾವರಣ, ಅಗತ್ಯ ಸೌಲಭ್ಯ ಕಲ್ಪಿಸಿಕೊಟ್ಟಲ್ಲಿ ನಮ್ಮವರು ವಿದೇಶೀಯರನ್ನು ಮೀರಿಸಬಲ್ಲರು ಎಂಬುದು ವಿಶ್ವೇಶ್ವರಯ್ಯನವರ ವಿಶ್ವಾಸ.

## 11. ವಿಶ್ವೇಶ್ವರಯ್ಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

ಕರ್ನಾಟಕದ ಕೊಡಚಾದ್ರಿ ಪರ್ವತ ಶ್ರೇಣಿಯ ಬಾಬಾಬುಡನ್‌ಗಿರಿ ಬೆಟ್ಟದಲ್ಲಿ ಉತ್ತಮ ದರ್ಜೆಯ ಕಬ್ಬಿಣದ ಅದಿರು ದೊರೆಯುತ್ತದೆ. ಕಬ್ಬಿಣದ ಅದಿರಿಗೆ ನೀರು ಬೆರೆಸಿ ಕೆಸರಿನ ರೊಚ್ಚೆಯನ್ನಾಗಿ ಮಾಡುತ್ತಿದ್ದರು. ಬೆಟ್ಟದ ಮೇಲಿಂದ ದೊಡ್ಡ ನಳಿಗೆಗಳ ಮೂಲಕ ಮಂಗಳೂರಿನ ಬಂದರಿಗೆ ಸಾಗಿಸುತ್ತಿದ್ದರು. ಅಲ್ಲಿಂದ ಅದು ವಿದೇಶಗಳಿಗೆ ಹೋಗುತ್ತಿತ್ತು.

ಬಾಬಾಬುಡನ್‌ಗಿರಿ ಬೆಟ್ಟದ ಮೇಲೆ ಕೆಮ್ಮಣ್ಣುಗುಂಡಿ ಬೇಸಿಗೆ ವಿಹಾರ ಸ್ಥಾನವಿದೆ. ಬೆಟ್ಟದ ತಪ್ಪಲಿನಲ್ಲಿ ಭದ್ರಾವತಿ ಕಬ್ಬಿಣ ಕಾರ್ಖಾನೆ ಇದೆ. ಈ ಕಬ್ಬಿಣ ಕಾರ್ಖಾನೆಗೆ ಈಗ ವಿಶ್ವೇಶ್ವರಯ್ಯನವರ ಹೆಸರನ್ನಿಟ್ಟಿದ್ದಾರೆ.

ಇಲ್ಲಿ ಕಬ್ಬಿಣ ಕಾರ್ಖಾನೆ ಪ್ರಾರಂಭಿಸಲು ವಿಶ್ವೇಶ್ವರಯ್ಯನವರು ಅನೇಕ ಎಡರುತೊಡರುಗಳನ್ನು ಅನುಭವಿಸಬೇಕಾಯಿತು. ಮೊದಲಿಗೆ ಇಲ್ಲಿ ಅದಿರನ್ನು ಕಬ್ಬಿಣವಾಗಿ ಪರಿವರ್ತಿಸಲು ಕಲ್ಲಿದ್ದಲು ಮತ್ತು ಸುಣ್ಣದಕಲ್ಲು ಲಭ್ಯ ಇರಲಿಲ್ಲ. ಇಲ್ಲಿ ಸುತ್ತಮುತ್ತ ಭಾರಿ ಕಾಡು ಇತ್ತು. ಮರ ಕಡಿದು ಇದ್ದಿಲು ತಯಾರಿಸಿಕೊಳ್ಳಬಹುದು ಎನಿಸಿತು ಅವರಿಗೆ. ಹೀಗೆ ಮರ ಕಡಿದು ಇದ್ದಿಲು ಮಾಡಿಕೊಳ್ಳುವುದನ್ನು ಅನೇಕ ದೇಶಗಳು ಅನುಸರಿಸುತ್ತಿದ್ದವು. ವಿಶ್ವೇಶ್ವರಯ್ಯನವರು ಕಬ್ಬಿಣ ಕಾರ್ಖಾನೆಯ ಯೋಜನೆಯನ್ನು ಸಿದ್ಧ ಪಡಿಸಿಯೇ ಬಿಟ್ಟರು. ಇವರು ತಯಾರಿಸಿದ ಯೋಜನೆಯ ಪರಿಶೀಲನೆ 1915-16ರಲ್ಲಿ ಪ್ರಾರಂಭವಾಯಿತು. ಜಂಷೆಡ್‌ಪುರದಲ್ಲಿದ್ದ ಟಾಟಾ ಕಂಪೆನಿಯ ಸಲಹೆಗಾರ ಸಿ. ಪಿ. ಪೆರಿನ್‌ಗೆ ಪರಿಶೀಲನೆಗೆ ಕಳುಹಿಸ ಲಾಯಿತು. ಆತ ಅದನ್ನು ಪರಿಶೀಲಿಸಿ ಒಪ್ಪಿಗೆಯನ್ನು ನೀಡಿದ. ಪೆರಿನ್ ಅಭಿಪ್ರಾಯದೊಂದಿಗೆ ಯೋಜನೆಯನ್ನು ಇನ್ನಿತರ ತಜ್ಞರಿಗೂ ಕಳುಹಿಸಿ ಕೊಡಲಾಯಿತು.

ತಜ್ಞರಿಂದ ಭಿನ್ನ ಅಭಿಪ್ರಾಯಗಳು ಬಂದವು. ಮೂಲ ಬಂಡವಾಳ ಅಂದಾಜಿಗಿಂತ ಇಪ್ಪತ್ತು ಲಕ್ಷ ಅಧಿಕವಾಗಬಹುದು ಎಂದು ಒಬ್ಬನ ಅಭಿಪ್ರಾಯ; ಲಾಭಾಂಶ 12 ರಿಂದ 16 ಆದೀತು ಎಂದು ಮತ್ತೊಬ್ಬ. ಆರ್ಥಿಕ ತಜ್ಞರು ಎಂಟರ ಮೇಲೆ ಲಾಭ ಬರಲಾರದೆಂದು ಅಭಿಪ್ರಾಯ ಪಟ್ಟರು. ಕೆಲವರು ಭದ್ರಾವತಿಗಿಂತ ಲಕ್ಕವಳ್ಳಿ ಸೂಕ್ತ ಸ್ಥಳ ಎಂದರು.

ಅಲ್ಬಿಯನ್ ಬ್ಯಾನರ್ಜಿ ಎಂಬುವರು ಇಂಡಿಯನ್ ಸಿವಿಲ್ ಸರ್ವೀಸ್ (ಭಾರತೀಯ ನಾಗರಿಕ ಸೇವೆ)ನ ಅಧಿಕಾರಿ. ಮೈಸೂರು ಮಂತ್ರಿ ಸಂಪುಟದ ದ್ವಿತೀಯ ಸದಸ್ಯರು. ಇದೇ ಕಾಲದಲ್ಲಿ ಪ್ರಥಮ ವಿಶ್ವ ಸಂಗ್ರಾಮ ನಡೆಯುತ್ತಿತ್ತು. ಆದ್ದರಿಂದ ಅವರು ಹೊರಗಿನಿಂದ ಯಂತ್ರ ಸಾಧನಗಳನ್ನು ತರಿಸಿಕೊಳ್ಳುವುದು ಅಸಾಧ್ಯ. ಕಂಪೆನಿಯನ್ನು ಸರ್ಕಾರ ನಡೆಸುವುದರ ಬದಲು ಯಾವುದಾದರೂ ಖಾಸಗಿ ಕಂಪೆನಿ ಜತೆ ಒಪ್ಪಂದ ಮಾಡಿಕೊಳ್ಳಿ

ಎಂದು ಸೂಚಿಸಿದರು. ಬ್ರಿಟಿಷ್ ಪ್ರಭುತ್ವದ ಒಪ್ಪಿಗೆ ಪಡೆದುಕೊಂಡು 1918ರ ಮೇ ತಿಂಗಳಿನಲ್ಲಿ ಟಾಟಾ ಕಂಪೆನಿಯೊಡನೆ ಒಪ್ಪಂದ ಮಾಡಿಕೊಂಡರು. ಜಂಷೆಡ್‌ಪುರದ ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಕಟ್ಟಿಕೊಟ್ಟವರು ನ್ಯೂಯಾರ್ಕಿನ ಪೆರಿನ್ ಮತ್ತು ಮಾರ್ಷಲ್ ಕಂಪೆನಿಯವರು. ಭದ್ರಾವತಿಯ ಕಾರ್ಖಾನೆಯ ಸ್ಥಾಪನೆಯನ್ನು ಇವರಿಗೆ ವಹಿಸಲಾಯಿತು. ಕಾರ್ಖಾನೆಗೆ ಅಗತ್ಯವಾದ ಕಬ್ಬಿಣದ ಅದಿರು, ಸುಣ್ಣ ಕಲ್ಲು, ಸೌದೆ, ನೀರು, ವಿದ್ಯುತ್ ಇವನ್ನು ಒದಗಿಸುವುದು ಸರ್ಕಾರದ ಹೊಣೆ. ಯಂತ್ರೋಪಕರಣಗಳನ್ನು ತರಿಸಿ, ಸಿದ್ಧಪಡಿಸಿ, ಸ್ಥಾಪಿಸಿ, ಕೆಲಸ ಪ್ರಾರಂಭಿಸಿ ಕೊಡುವುದು ಪೆರಿನ್ ಮತ್ತು ಮಾರ್ಷಲ್ ಕಂಪೆನಿಯ ಹೊಣೆ. ಆಡಳಿತ ವ್ಯವಹಾರ ಟಾಟಾ ಕಂಪೆನಿಯ ಜವಾಬ್ದಾರಿ. ಮೊದಲ ಅಂದಾಜು ವೆಚ್ಚ 63.59 ಲಕ್ಷ ರೂಪಾಯಿಗಳು. ಧಾರಣೆಗಳು ಏರುತ್ತಿದ್ದುದರಿಂದ ಸರ್ಕಾರ 94 ಲಕ್ಷ ರೂಪಾಯಿ ಮಂಜೂರು ಮಾಡಿತು. 1917-18ರಲ್ಲಿ ನಿರ್ಮಾಣ ಕೆಲಸ ಪ್ರಾರಂಭವಾಯಿತು. 1922ಕ್ಕೆ ಅಂದಾಜು ವೆಚ್ಚ 211 ಲಕ್ಷಕ್ಕೆ ಏರಿತು. 1919ರಲ್ಲಿ ಅಂತ್ಯವಾಗಬೇಕಿದ್ದ ನಿರ್ಮಾಣ ಕಾರ್ಯ 1923ರಲ್ಲಿ ಮುಕ್ತಾಯವಾಯಿತು. ಜನವರಿ 1923ರಲ್ಲಿ ಕಾರ್ಖಾನೆ ಕೆಲಸ ಆರಂಭಿಸಿತು. ಬೃಹತ್ ಕಾರ್ಖಾನೆಯ ಎಲ್ಲಾ ವಿಭಾಗಗಳ ನಿರ್ಮಾಣ ಕೆಲಸ ಮುಗಿದಿರಲಿಲ್ಲ.

ಸಾಮಾನ್ಯವಾಗಿ ಅದಿರು ಭೂಗರ್ಭದಲ್ಲಿ ಅಡಗಿರುತ್ತದೆ. ಅಗೆದು ಹೊರತೆಗೆಯುತ್ತಾರೆ. ಭದ್ರಾವತಿಯಿಂದ 36 ಮೈಲಿಗಳ ಸಮೀಪದ ಕೆಮ್ಮಣ್ಣುಗುಂಡಿ ಗುಂಡಿಯಲ್ಲ, ಅದೊಂದು ಅದಿರಿನ ಬೆಟ್ಟ. ಮೊದಲ ಯೋಜನೆಯಂತೆ 100 ಚದರ ಮೈಲಿ ವಿಸ್ತೀರ್ಣದ 12 ಮೈಲಿ ಉದ್ದ 6 ಮೈಲಿ ಅಗಲದ ದಟ್ಟ ಕಾಡಿನಿಂದ ದೊಡ್ಡ ಮರಗಳನ್ನು ಕಡಿದು ಭದ್ರಾವತಿಗೆ ಸಾಗಿಸುವುದು. ಈ ಅರಣ್ಯದಿಂದ ವರ್ಷಕ್ಕೆ 3,000 ಟನ್ ಸೌದೆ ಒದಗಿಸುವ ಅಂದಾಜು. ಮರವನ್ನು ಟ್ರಾಂ ಮತ್ತು ರೈಲು ಮುಖೇನ ಕಾರ್ಖಾನೆಗೆ ಸಾಗಿಸುವುದು. ಇದಕ್ಕೆ ಬೇಕಾದದ್ದು 125 ಮೈಲಿಗಳ ಉದ್ದದ ಖಾಯಂ ರೈಲು ಮಾರ್ಗ, 45 ಮೈಲಿಗಳ ತಾತ್ಕಾಲಿಕ ಮಾರ್ಗ,

12 ಎಂಜಿನ್ ಮತ್ತು 250 ವ್ಯಾಗನ್. ಅದಿರು ಪ್ರದೇಶದ ಕೆಮ್ಮಣ್ಣುಗುಂಡಿ ಸಮುದ್ರ ಮಟ್ಟದಿಂದ 5,000 ಅಡಿ ಎತ್ತರ ಇದೆ. ಅದಿರನ್ನು ಅಂಕುಡೊಂಕು ಬಳಸು ಮಾರ್ಗದ ರಸ್ತೆಯಿಂದ ಸಾಗಿಸುವಂತೆ ಯೋಜಿಸಲಾಗಿತ್ತು. ಇದಕ್ಕೆ ಬದಲಾಗಿ 'ರೋಪ್‌ವೇ' (ತೂಗು ತೊಟ್ಟಿಲಿನ) ನೆರವಿನಿಂದ ನೇರವಾಗಿ ಸಾಗಿಸುವುದು ಸುಲಭ. ವೆಚ್ಚ ಕಡಿಮೆ. ವಿಶ್ವೇಶ್ವರಯ್ಯನವರು ಇದನ್ನು ಸ್ಥಾಪಿಸಿದರು. ಸಮಾನ ಅಂತರದ ಎರಡು ಬಲವಾದ ಉಕ್ಕಿನ ಹಗ್ಗಗಳು ಮೇಲಿನಿಂದ ಕೆಳಕ್ಕೆ ವಿದ್ಯುತ್ತಿನ ಸಹಾಯದಿಂದ ಚಲಿಸುತ್ತವೆ. 300 ಅಡಿಗಳ ಅಂತರದಲ್ಲಿ ತೊಟ್ಟಿಲುಗಳನ್ನು ತೂಗುಹಾಕಲಾಗಿದೆ. ಘಂಟೆಗೆ 10 ಟನ್ ಅದಿರನ್ನು ಅವು ಕೊಂಡೊಯ್ಯುತ್ತವೆ.

ಪ್ರತಿ ಟನ್ ಕಬ್ಬಿಣ ತಯಾರಿಸಲು ಆಗುತ್ತಿದ್ದ ವೆಚ್ಚ 30 ರೂಪಾಯಿ. ಬೀಡು ಕಬ್ಬಿಣದ ಪೇಟೆಧಾರಣೆ 60 ರೂಪಾಯಿ. ಯುದ್ಧ ಮುಗಿಯಿತು. ಧಾರಣೆ ಇಳಿಯತೊಡಗಿತು. ಟನ್ನಿಗೆ 100 ರೂಪಾಯಿಗೆ ಏರಿದ್ದುದು ಕ್ರಮೇಣ 45 ರೂಪಾಯಿಗೆ ಇಳಿಯಿತು. ಉತ್ಪಾದನೆ ನಿರೀಕ್ಷಣೆಯ ಅರ್ಧದಷ್ಟೂ ಆಗುತ್ತಿರಲಿಲ್ಲ. ನಷ್ಟವನ್ನು ಪ್ರಾರಂಭದಲ್ಲೇ ಅನುಭವಿಸುವುದಕ್ಕಿಂತ ಕುಲುಮೆಯ ಕೆಲಸ ಸ್ಥಗಿತಗೊಳಿಸುವುದೇ ಸೂಕ್ತ ಎಂದು ತಜ್ಞರು, ಸರ್ಕಾರದ ಉನ್ನತ ಅಧಿಕಾರಿಗಳು ಸಲಹೆ ನೀಡಿದರು.

ಉತ್ಪಾದನೆಯ ಕೆಲಸ ಸ್ಥಗಿತಗೊಳಿಸಬೇಕೆಂಬ ಸಲಹೆ ಮಹಾರಾಜರನ್ನು ಕಳವಳಕ್ಕೆ ಈಡು ಮಾಡಿತು. ಮಂಡಳಿ ಕಾರ್ಯ ನಿರ್ವಹಿಸುವ ಸಾಮರ್ಥ್ಯ ಪಡೆದಿಲ್ಲವೆಂದು ಮಹಾರಾಜರು ಗ್ರಹಿಸಿದರು. ಬೊಂಬಾಯಿಯಲ್ಲಿದ್ದ ವಿಶ್ವೇಶ್ವರಯ್ಯನವರನ್ನು ಕೂಡಲೇ ಕರೆಸಿಕೊಳ್ಳಿ ಎಂದು ದಿವಾನ್ ಬ್ಯಾನರ್ಜಿಯವರಿಗೆ ಆಜ್ಞಾಪಿಸಿದರು. ಕಾರ್ಖಾನೆ ಅಸ್ತಿತ್ವಕ್ಕೆ ಬರಲು ಕಾರಣಕರ್ತ ತಾನು. ಇದನ್ನು ಸುಸ್ಥಿತಿಗೆ ತರುವುದು ತನ್ನ ಕರ್ತವ್ಯ ಎಂದು ತಿಳಿದು ವಿಶ್ವೇಶ್ವರಯ್ಯನವರು ಕೂಡಲೇ ಹೊರಟು ಬಂದರು. ಕಾರ್ಖಾನೆಯನ್ನು ಉತ್ತಮ ಸ್ಥಿತಿಗೆ ತರಲು ತನಗೆ ಪೂರ್ಣ ಸ್ವಾತಂತ್ರ್ಯ ಬೇಕೆಂದು ದೃಢಪಡಿಸಿದರು. ಕೆಲಸವನ್ನು ಅಪೂರ್ಣವಾಗಿ ಬಿಟ್ಟು

ಹೋಗಿದ್ದ ಪೆರಿನ್ ಕಂಪೆನಿಗೆ ಕೂಡಲೇ ಬಂದು ಕೆಲಸ ಪೂರ್ಣಗೊಳಿಸುವಂತೆ ತಿಳಿಸಿದರು. ಅವರು ಬಂದು ಕೆಲಸ ಪೂರ್ಣಗೊಳಿಸಿ ಮೂವರು ದಕ್ಷ ಕೆಲಸಗಾರರನ್ನು ಇಲ್ಲಿಯೇ ಬಿಟ್ಟು ಹೋದರು.

ವಿಶ್ವೇಶ್ವರಯ್ಯನವರು ಕಾರ್ಖಾನೆಗೆ ಹೊಸ ಆಡಳಿತ ಮಂಡಳಿ ರಚಿಸಿದರು. ಯಾವ ಕೆಲಸವನ್ನೇ ಆಗಲಿ, ಆಡಳಿತ ಮಂಡಳಿಯ ಗಮನಕ್ಕೆ ತರದೆ ಕೈಗೊಳ್ಳಕೂಡದೆಂದು ಕಟ್ಟಪ್ಪಣೆ ಮಾಡಿದರು. ಕಾರ್ಖಾನೆಗೆ ಸೇರಿದ ಆಸ್ತಿಪಟ್ಟಿ ಸಿದ್ಧವಾಯಿತು. ಅದಕ್ಕೆ ಬೆಲೆಕಟ್ಟಲಾಯಿತು. ಕಾರ್ಖಾನೆಯ ಸಮಸ್ತ ಕಾರ್ಯಗಳನ್ನು ಆಡಳಿತ ವಿಭಾಗ, ಕೇಂದ್ರ ಕಾರ್ಖಾನೆಯ ವಿಭಾಗ, ಸಂಶೋಧನೆಯ ವಿಭಾಗ, ನಗರ ವಿಭಾಗ, ಗಣಿ ವಿಭಾಗ, ಮುಂತಾದ ಏಳು ವಿಭಾಗಗಳಾಗಿ ವಿಂಗಡಿಸಿದರು. ಪ್ರತಿ ವಿಭಾಗಕ್ಕೂ ಕೆಲಸ ನಿರ್ದಿಷ್ಟಗೊಳಿಸಿದರು. ಎಲ್ಲಾ ವಿಭಾಗಗಳ ಕೆಲಸಕಾರ್ಯಗಳನ್ನು ಸಮನ್ವಯಗೊಳಿಸಿದರು. ಆಡಳಿತ ಮಂಡಲಿಗೆ ಸರ್ಕಾರದ ಅಧಿಕಾರಿಯೊಬ್ಬರು ಕಾರ್ಯದರ್ಶಿಗಳಾದರು. ಪ್ರತಿ ಸೋಮವಾರ ಮತ್ತು ಪ್ರತಿ ತಿಂಗಳು ವಿಭಾಗದ ಕಾರ್ಯನಿರ್ವಹಣೆಯ ವರದಿಯನ್ನು ಮಂಡಲಿಗೆ ಒಪ್ಪಿಸುವಂತೆ ಮಾಡಿದರು. ವಿಶ್ವೇಶ್ವರಯ್ಯನವರೇ ಮಂಡಲಿಯ ಅಧ್ಯಕ್ಷರು. ಅವರ ದಕ್ಷತೆ, ಪ್ರಾಮಾಣಿಕತೆ, ಕಾಲನಿಷ್ಠೆ ಇವೆಲ್ಲಾ ಇಡೀ ಕಾರ್ಖಾನೆ ಮೇಲೆ ಪ್ರಭಾವ ಬೀರಿತು. ಪ್ರತಿಯೊಬ್ಬ ನೌಕರನೂ ಕಾರ್ಖಾನೆ ಮುಚ್ಚಿಹೋಗುತ್ತದೆಂದು ಹೆದರಿದ್ದ. ವಿಶ್ವೇಶ್ವರಯ್ಯನವರ ಧೈರ್ಯದಿಂದಾಗಿ ಕಾರ್ಖಾನೆ ಮುಚ್ಚಲಿಲ್ಲ. ಇದರಿಂದ ಪ್ರತಿಯೊಬ್ಬ ನೌಕರನೂ ತನ್ನ ಜವಾಬ್ದಾರಿ ಅರಿತು ಮನಃಪೂರ್ವಕವಾಗಿ ಶ್ರಮಿಸತೊಡಗಿದ.

ಈ ಮಧ್ಯೆ ಕಾರ್ಖಾನೆ ಅನೇಕ ಕಷ್ಟ ಸಂಕಟಗಳನ್ನು ಅನುಭವಿಸಬೇಕಾಗಿ ಬಂತು. ಭಾರಿ ಮಳೆಯಿಂದಾಗಿ ಭದ್ರಾ ನದಿ ಭೋರ್ಗರೆಯಿತು. ಕುಲುಮೆಗೂ ನೀರು ನುಗ್ಗಿತು. ಅದರ ಮುಖ್ಯಸ್ಥನಾಗಿದ್ದವನು ವಿ. ಜಿ. ಗುಡ್ಕೋ ಎಂಬ ಅಮೆರಿಕಾದ ಇಂಜಿನಿಯರ್. ಅವನ ಅನಾದರಣೆ ಇದಕ್ಕೆ ಮುಖ್ಯ ಕಾರಣ. ನೀರು ಒಳನುಗ್ಗದಂತೆ ಅವನು ಕ್ರಮ ಕೈಗೊಂಡಿರಲಿಲ್ಲ. ಈ ಅನಾಹುತವನ್ನು ಸರಿಪಡಿಸಲು ಆರು ತಿಂಗಳು ಬೇಕಾಯಿತು.

ಸಹಜವಾಗಿಯೇ ವಿಶ್ವೇಶ್ವರಯ್ಯನವರು ಕುಪಿತರಾದರು. ಪೆರಿನ್ ಕಂಪೆನಿಗೆ ಬರೆದು ಸಮಜಾಯಿಷಿ ಕೇಳಿದರು. ಗುಡ್ನೋ ಮೇಲೆ ಇನ್ನೊಬ್ಬ ಭಾರತೀಯನನ್ನು ನೇಮಿಸಿದರು. ಇದರಿಂದ ಕೋಪಗೊಂಡ ಗುಡ್ನೋ ರಾಜೀನಾಮೆ ನೀಡಿ ಸ್ವದೇಶಕ್ಕೆ ಮರಳಿದ.

ಭದ್ರಾವತಿ ಕಾರ್ಖಾನೆಯಲ್ಲಿ ಕನಿಷ್ಠ ಅಮೆರಿಕಾದ ಹನ್ನೊಂದು ನಿಪುಣರಾದರೂ ಇರಲು ಮ್ಯಾನೇಜಿಂಗ್ ಏಜೆಂಟರು ಗೊತ್ತು ಮಾಡಿಕೊಂಡು ನೇಮಿಸಿದ್ದರು. ಅವರಿಗೆ ಭಾರತೀಯರಿಗಿಂತ ಅಧಿಕ ವೇತನ ಮತ್ತು ಇತರ ಸೌಲಭ್ಯಗಳು. ಇದು ವಿಶ್ವೇಶ್ವರಯ್ಯನವರಿಗೆ ಇಷ್ಟವಾಗಲಿಲ್ಲ. ನಮ್ಮ ಜನ ವಿದ್ಯಾಬುದ್ಧಿಯಲ್ಲಿ, ಜಾಣ್ಮೆಯಲ್ಲಿ ಯಾರಿಗೂ ಕಡಿಮೆ ಇಲ್ಲ ಎಂದು ಅವರು ತಿಳಿದಿದ್ದರು. ತಜ್ಞ ಅಮೆರಿಕನ್ನರನ್ನು ಸೇವೆಯಿಂದ ನಿವೃತ್ತಗೊಳಿಸಿ ಅವರ ದೇಶಕ್ಕೆ ಕಳಿಸಿಕೊಟ್ಟರು. ಕೆಲವು ತಿಂಗಳುಗಳಲ್ಲೇ ಕಾರ್ಖಾನೆಯಲ್ಲಿ ವಿದೇಶಿಯರ ಸುಳಿವೇ ಇಲ್ಲದಂತೆ ಮಾಡಿದರು. ಅವರ ಸ್ಥಾನಗಳಿಗೆ ಭಾರತೀಯ



ಭದ್ರಾವತಿಯ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ

ವಿಜ್ಞಾನಿಗಳನ್ನು, ಇಂಜಿನಿಯರುಗಳನ್ನು ನೇಮಿಸಿದರು. ಅವರನ್ನು ಪ್ರೋತ್ಸಾಹಿಸಿದರು. ಧೈರ್ಯ ತುಂಬಿದರು.

ಕಾರ್ಖಾನೆ ವ್ಯವಸ್ಥಿತವಾಗಿ ಗಡಿಯಾರದಂತೆ ಕೆಲಸ ನಿರ್ವಹಿಸಬೇಕು, ಲಾಭದಾಯಕವಾಗಬೇಕು, ಭದ್ರ ಬುನಾದಿಯ ಮೇಲೆ ನಿಲ್ಲಬೇಕು. ಇದು ವಿಶ್ವೇಶ್ವರಯ್ಯನವರ ಪ್ರಥಮ ಗುರಿ. ಮಂಡಳಿಯ ಸಹಕಾರದಿಂದ ಈ ವಿಷಯಗಳಿಗೆ ಹೆಚ್ಚು ಗಮನ ಹರಿಸುತ್ತಾ ಬಂದರು. ಉತ್ಪನ್ನ ಇವರ ಪ್ರಯತ್ನಗಳಿಂದ ಬಹುಮಟ್ಟಿಗೆ ತೃಪ್ತಿಕರವಾಯಿತು. ಭದ್ರಾವತಿ ಉತ್ಪಾದಿಸುತ್ತಿದ್ದದ್ದು ಶೇಷ್ಠ ಶ್ರೇಣಿಯ ಕಬ್ಬಿಣ. ಇದಕ್ಕೆ ಯೋಗ್ಯ ಬೆಲೆ ಕೊಡಲು ಬಳಕೆದಾರರು ತಯಾರಿರಲಿಲ್ಲ. ಉಪ ಉತ್ಪನ್ನಗಳಿಗೆ ಇಂಗ್ಲೆಂಡಿನಲ್ಲಿ ಕೊಳ್ಳುವವರು ದೊರೆತರು. 1924ರಲ್ಲಿ ತಮ್ಮ ವಸ್ತುಗಳನ್ನು ಮಾರಾಟ ಮಾಡಲು ಬೊಂಬಾಯಿಯಲ್ಲಿ ಒಂದು ಶಾಖೆಯನ್ನೂ ಕರಾಚಿ, ಅಹಮದಾಬಾದ್, ಮದರಾಸುಗಳಲ್ಲಿ ಏಜೆನ್ಸಿಗಳನ್ನು ತೆರೆಸಿದರು. ವ್ಯಾಪಾರ ತಕ್ಕ ಮಟ್ಟಿಗೆ ಕುದುರಿತು. ಆದರೆ ವಿಶ್ವೇಶ್ವರಯ್ಯನವರು ಇದರಿಂದ ತೃಪ್ತರಾಗಲಿಲ್ಲ. ತಮ್ಮ ಸ್ವಂತ ವೆಚ್ಚದಿಂದ ವಿದೇಶಗಳ ಪ್ರವಾಸ ಕೈಗೊಂಡರು. ಜರ್ಮನಿ, ಅಮೆರಿಕ, ಇಂಗ್ಲೆಂಡ್, ಸ್ವೀಡನ್ ಈ ದೇಶಗಳಲ್ಲಿ ಕೆಲವು ಕಾರ್ಖಾನೆಗಳು ಮರದ ಇದ್ದಿಲಿನಿಂದ ಕಬ್ಬಿಣ ತಯಾರಿಸುತ್ತಿದ್ದವು. ಅವರು ಅಧಿಕ ಅನುಭವ ಗಳಿಸಿದ್ದರು. ಭದ್ರಾವತಿಯು ಬಗೆಹರಿಸಲಾಗದ ಕೆಲವು ಸಮಸ್ಯೆಗಳನ್ನು ಈ ಕಾರ್ಖಾನೆಗಳಿಗೆ ಭೇಟಿ ನೀಡಿ ಪರಿಶೀಲಿಸಿ ಬಗೆಹರಿಸಲು ಸಾಧ್ಯವಾಯಿತು. ಲಂಡನ್ನಿನ ಪತ್ರಿಕೆಗಳಲ್ಲಿ ಭದ್ರಾವತಿಯ ಉತ್ಪನ್ನಗಳನ್ನು ಪೈಪೋಟಿ ದರದಲ್ಲಿ ಒದಗಿಸಲಾಗುವುದು ಎಂದು ಜಾಹಿರಾತು ಪ್ರಕಟಿಸಿದರು. ಇದರಿಂದ ಪ್ರತಿ ವರ್ಷ 5,000 ಟನ್ ಬೀಡು ಕಬ್ಬಿಣ ಕೊಳ್ಳುವ ಗಿರಾಕಿಗಳನ್ನು ಗಿಟ್ಟಿಸಿದರು. ಅಮೆರಿಕ 5,000 ಟನ್ ಕಬ್ಬಿಣ ಕೊಳ್ಳಲು ಒಪ್ಪಿತು. ವರ್ತಕರು ಇನ್ನೂ ಹೆಚ್ಚು ಕೊಳ್ಳಲು ತಯಾರಾಗಿದ್ದರು. ಆದರೆ ಬ್ರಿಟಿಷ್ ಸರ್ಕಾರ ಅನುಮತಿಯನ್ನು ನಿರಾಕರಿಸಿತು.

ಕಬ್ಬಿಣ ಮತ್ತು ಇತರ ಉತ್ಪನ್ನಗಳ ಮಾರಾಟದಿಂದ ವಿಶ್ವೇಶ್ವರಯ್ಯನವರು ತೃಪ್ತರಾಗಲಿಲ್ಲ. ಬೆಂಗಳೂರು ಮತ್ತು ಮೈಸೂರು ನಗರಗಳಿಗೆ

ನೀರು ಹಾಯಿಸುವ ದೊಡ್ಡ ವ್ಯಾಸದ ನಳಗಳು ಬೇಕಾಗಿದ್ದವು. ವಿದೇಶಗಳಿಂದ ಆಮದು ಮಾಡಿಕೊಳ್ಳುವ ಬದಲು ಭದ್ರಾವತಿಯಲ್ಲೇ ಎರಕಹೊಯ್ಯುವ ವ್ಯವಸ್ಥೆ ಮಾಡಿದರು. ಇದರಿಂದ ವಿದೇಶ ವಿನಿಮಯದ ಉಳಿತಾಯವಾಯಿತು. ಸ್ವದೇಶಿಗೆ ಪ್ರೋತ್ಸಾಹ ದೊರಕಿತು. ಲಾಭ ದೊರಕಿ ನಷ್ಟ ಹಿಂದೆ ಸರಿಯಿತು. ಭದ್ರಾವತಿ ಭದ್ರ ಬುನಾದಿಯ ಮೇಲೆ ನಿಂತಿತು. ಆರು ವರ್ಷಗಳ ನಿರಂತರ ಶ್ರಮದಿಂದ ನಷ್ಟ ಅನುಭವಿಸುತ್ತಿದ್ದ ಕಾರ್ಖಾನೆ ಲಾಭ ಗಳಿಸುವಂತೆ ಮಾಡಿದರು. ಈ ಸಂತೃಪ್ತಿಯ ನಂತರವೇ ಕಾರ್ಖಾನೆಯಿಂದ ನಿವೃತ್ತರಾಗುವ ತಮ್ಮ ಬಯಕೆಯನ್ನು ಮಹಾ ರಾಜರಿಗೆ ತಿಳಿಸಿದರು.

ಇದಕ್ಕೆ ಮಹಾರಾಜರ ಮನ ಒಪ್ಪದು. "ಆರೂವರೆ ವರ್ಷಗಳಿಂದ ತಮ್ಮ ಅಮೂಲ್ಯವಾದ ಕಾಲ ಮತ್ತು ಶಕ್ತಿ ಸಾಮರ್ಥ್ಯವನ್ನು ಧಾರೆ ಎರೆದಿದ್ದೀರಿ. ತಮ್ಮ ಮಹೋನ್ನತ ಸಾಧನೆ ನಮ್ಮ ಮೆಚ್ಚುಗೆ ಗಳಿಸಿದೆ" ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಅವರು ನಿವೃತ್ತರಾಗುವ ವಿಷಯ ತಿಳಿದ ಪೆರಿನ್ ಕಂಪೆನಿಯ ಪೆರಿನ್ ಅವರು "ನೀವು ನಿವೃತ್ತರಾಗುವ ವಿಷಯ ತಿಳಿದು ದುಃಖ ವ್ಯಕ್ತಪಡಿಸಲು ನನ್ನಿಂದ ಸಾಧ್ಯವಾಗುತ್ತಿಲ್ಲ. ನೀವಿಲ್ಲದಿದ್ದರೆ ಈ ಕಾರ್ಖಾನೆ ಇರುತ್ತಿರಲಿಲ್ಲ. ನಿಮ್ಮಿಂದಲೇ ಇದು ನಿಂತಿದೆ. ನೈತಿಕ ಜೀವನದ ಮಟ್ಟ, ಉದಾತ್ತ ಧ್ಯೇಯ, ದೇಶಪ್ರೇಮ ಇವುಗಳಿಗೆ ಮಾತ್ರವಲ್ಲ, ನಿಮ್ಮ ಅಸಾಧಾರಣ ಇಂಜಿನಿಯರಿಂಗ್ ಪ್ರತಿಭೆಗೆ ಸರಿದೂಗುವ ಇನ್ನೊಬ್ಬ ವ್ಯಕ್ತಿಯನ್ನು ನಾ ಕಾಣೆ" ಎಂದು ಹೇಳಿದ್ದಾರೆ.

ಕಾರ್ಖಾನೆಗೆ ಸೇವೆ ಸಲ್ಲಿಸಿದ ಅವಧಿಯಲ್ಲಿ ವಿಶ್ವೇಶ್ವರಯ್ಯನವರು ಯಾವ ಸಂಭಾವನೆಯನ್ನೂ ಸ್ವೀಕರಿಸಲಿಲ್ಲ. ಇವರಿಗೆ 1,30,000 ರೂಪಾಯಿಗಳ ಗೌರವ ಸಂಭಾವನೆ ಸಲ್ಲಬೇಕಾಗಿತ್ತು. ಆದರೆ ಹಣ ತೆಗೆದುಕೊಳ್ಳಲು ನಿರಾಕರಿಸಿದರು. "ಹಣ ಗಳಿಸುವ ಆಸೆಯ ವಯಸ್ಸು ಕಳೆದುಹೋಯಿತು. ಹಣದಾಸೆ ನನ್ನಲ್ಲಿ ಉಡುಗಿ ಹೋಗಿದೆ" ಎಂದರು. ವೃತ್ತಿಶಿಕ್ಷಣವನ್ನು ಸ್ಥಾಪಿಸುವುದಕ್ಕೆ ಸರ್ಕಾರಕ್ಕೆ ಆ ಹಣ ನೀಡಿದರು. ಅದಕ್ಕೆ

ಬೇಕಾದ ಯೋಜನೆ ರೂಪಿಸಿಕೊಟ್ಟರು. ಆ ಶಿಕ್ಷಣಾಲಯಕ್ಕೆ ವಿಶ್ವೇಶ್ವರಯ್ಯನವರ ಹೆಸರಿಡುವ ಆಸೆ ಮಹಾರಾಜರಿಗೆ. ಅದಕ್ಕೂ ಅವರು ಒಪ್ಪಲಿಲ್ಲ. ಮಹಾರಾಜರ ಹೆಸರನ್ನೇ ಇಡಲು ಒತ್ತಾಯಿಸಿದರು. ಬೆಂಗಳೂರಿನಲ್ಲಿರುವ ಜಯಚಾಮರಾಜೇಂದ್ರ ವೃತ್ತಿಶಿಕ್ಷಣ ಸಂಸ್ಥೆ ಇಂದು ಅನೇಕ ವಿದ್ಯಾರ್ಥಿಗಳಿಗೆ ವಿದ್ಯೆ ನೀಡುತ್ತಿದೆ. 1975ರ ನವೆಂಬರ್ 10 ರಂದು ಈ ಸಂಸ್ಥೆಗೆ ವಿಶ್ವೇಶ್ವರಯ್ಯನವರ ಹೆಸರು ಇಡಲಾಯಿತು.

ವಿಶ್ವೇಶ್ವರಯ್ಯನವರು 1929ರಲ್ಲಿ ಕಾರ್ಖಾನೆಯ ಆಡಳಿತ ಮಂಡಳಿಯಿಂದ ವಿಮುಕ್ತರಾದರು. ಭದ್ರಾವತಿ ಯೋಜನೆ ಸಿದ್ಧಪಡಿಸಿದಾಗಿನಿಂದಲೂ ಇವರ ವಿರುದ್ಧ ಅಪಪ್ರಚಾರ ಪುಂಖಾನುಪುಂಖವಾಗಿ ಬರುತ್ತಲೇ ಇತ್ತು. 1927ರಲ್ಲಿ ಮಹಾತ್ಮಾಗಾಂಧಿಯವರು ಆರೋಗ್ಯ ಸುಧಾರಿಸಿಕೊಳ್ಳಲು ಮೈಸೂರಿಗೆ ಬಂದಿದ್ದರು. ಈ ಸಂದರ್ಭದಲ್ಲಿ ಹೈಕೋರ್ಟಿನ ಒಬ್ಬ ನಿವೃತ್ತ ನ್ಯಾಯಾಧೀಶರು ಕೃಷ್ಣರಾಜಸಾಗರ ಮತ್ತು ಭದ್ರಾವತಿಯ ಕಾರ್ಖಾನೆ ವಿರುದ್ಧ ಪತ್ರಿಕೆಗಳಲ್ಲಿ ಬಂದ ಟೀಕೆಗಳನ್ನು ಸಂಗ್ರಹಿಸಿ ಅವರಿಗೆ ಕಳುಹಿಸಿಕೊಟ್ಟರು. ಗಾಂಧೀಜಿ ಬಿಡುವು ಮಾಡಿಕೊಂಡು ಕೃಷ್ಣರಾಜಸಾಗರ ಮತ್ತು ಭದ್ರಾವತಿಯನ್ನು ಸಂದರ್ಶಿಸಿದರು. ಅಧಿಕಾರಿ ವರ್ಗದಿಂದ ವಿಷಯ ಸಂಗ್ರಹಿಸಿದರು. "ನಾಳೆಯೇ ಈ ಕಾರ್ಖಾನೆ ಮುಚ್ಚಬೇಕಾಗಿ ಬಂದರೂ ಚಿಂತೆ ಇಲ್ಲ. ಹೊಸ ಉದ್ಯಮ ಸ್ಥಾಪಿಸಿ ನಡೆಸಿಕೊಂಡು ಬರುವ ಸಾಮರ್ಥ್ಯವನ್ನು ಭಾರತೀಯರು ಇದರಿಂದ ಗಳಿಸಿದ್ದಾರೆ. ಸಂಭವಿಸಬಹುದಾದ ಕಷ್ಟ-ನಷ್ಟ ಪರಿಹರಿಸುವ ಧೈರ್ಯ ಮತ್ತು ಅನುಭವ ಗಳಿಸಿದ್ದಾರೆ" ಎಂದು ಹೇಳಿದರು.

1918ರಲ್ಲಿ ವಿಶ್ವೇಶ್ವರಯ್ಯನವರಿಂದ ಪ್ರಾರಂಭವಾದ ಕಬ್ಬಿಣದ ಕಾರ್ಖಾನೆ ಇಂದು ವಿಸ್ತಾರವಾಗಿ ಬೆಳೆದು ನಿಂತಿದೆ. ಉಕ್ಕು ಮತ್ತು ಮಿಶ್ರಲೋಹಗಳ ತಯಾರಿಕೆಯಲ್ಲಿ ಪ್ರಮುಖ ಸ್ಥಾನ ಗಳಿಸಿದೆ. 12,500ಕ್ಕೂ ಹೆಚ್ಚು ಜನ ಉದ್ಯೋಗಿಗಳು ಅಲ್ಲಿ ಕೆಲಸ ಮಾಡುತ್ತಿದ್ದಾರೆ.

"ಕಲ್ಪನೆಯಲ್ಲಿ, ಸಾಹಸಿಕ ಕೃತಿಯಲ್ಲಿ ವಿಶ್ವೇಶ್ವರಯ್ಯನವರ ಪ್ರತಿಯೊಂದು ನಿರ್ಮಾಣವೂ ಜೀವಂತ ಸ್ಮಾರಕಗಳಾಗಿ ತಲೆ ಎತ್ತಿ ನಿಂತಿವೆ" ಎಂದು ಕೇಂದ್ರದಲ್ಲಿ ಸಚಿವರಾಗಿದ್ದ ಸ್ವರ್ಣಸಿಂಗ್ ಹೇಳಿದ್ದಾರೆ.

# 12. ರೈಲು ಮತ್ತು ರೇವು

ಎಲ್ಲಾ ನಾಡಿನ ಜೀವನಾಡಿ ರೈಲು ಮತ್ತು ರಸ್ತೆ. ವಿಶ್ವೇಶ್ವರಯ್ಯನವರು ಮೈಸೂರು ಸಂಸ್ಥಾನದ ಸೇವೆಗೆ ಬಂದಾಗ ಸಂಸ್ಥಾನದಲ್ಲಿದ್ದ ರೈಲು ಮದರಾಸು ಮತ್ತು ದಕ್ಷಿಣ ಮಹಾರಾಷ್ಟ್ರ ಕಂಪೆನಿಯ ಸ್ವಾಧೀನದಲ್ಲಿತ್ತು. ಇದಕ್ಕೆ ಬಂಡವಾಳ ಒದಗಿಸಿದ್ದವರು ಆಂಗ್ಲ ಷೇರುದಾರರು. ಕಂಪೆನಿಯ ಮುಖ್ಯ ಕಛೇರಿ ಇದ್ದದ್ದು ಲಂಡನ್ನಿನಲ್ಲಿ, ಲಾಭ ಹಂಚಿಕೆಯಾಗುತ್ತಿದ್ದುದೂ ಹೊರಗಿನವರಿಗೆ. ಬ್ರಿಟಿಷರು ಸೇನೆಯನ್ನು ಸಾಗಿಸಲು ರೈಲು ಮಾರ್ಗಗಳನ್ನು ಮೊದಲು ನಿರ್ಮಿಸಿದರು. ಅನಂತರ ಅದು ಸಾರ್ವಜನಿಕ ಸೇವೆಗೆ ದೊರೆಯಿತು. ಕಂಪೆನಿಯ ಅಧೀನದಲ್ಲಿದ್ದ ರೈಲುಮಾರ್ಗವನ್ನು ಮೈಸೂರು ಮಹಾರಾಜರ ಸರ್ಕಾರ ತನ್ನ ವಶಕ್ಕೆ ತೆಗೆದುಕೊಳ್ಳಬೇಕು, ಅನಂತರ ರೈಲು ಮಾರ್ಗಗಳನ್ನು ವಿಸ್ತರಿಸಿ ಹೆಚ್ಚು ಜನೋಪಯೋಗಿ ಮಾಡಬಹುದು ಎಂಬುದು ವಿಶ್ವೇಶ್ವರಯ್ಯನವರ ಉದ್ದೇಶ.

ರೈಲು ಸುಲಭ ದರದಲ್ಲಿ ಸರಕು ಮತ್ತು ಪ್ರಯಾಣಿಕರನ್ನು ಒಯ್ಯುತ್ತದೆ. "ರೈಲು ಭಾರವಾಹಕವಾಗಿಯೂ, ಪ್ರಯಾಣಿಕರನ್ನು ಪ್ರಯಾಸವಿಲ್ಲದೆ ದೂರದೂರದ ಪ್ರದೇಶಗಳಿಗೆ ಸಾಗಿಸುವ ಸುಲಭ ಸಾಧನವಾಗಿಯೂ ದೀರ್ಘಕಾಲ ಉಳಿಯುವುದರಲ್ಲಿ ಸಂದೇಹವಿಲ್ಲ. ರೈಲು ಇಲ್ಲದ ಕಡೆಗಳಲ್ಲಿ ಗ್ರಾಮಗಳ ಉತ್ಪಾದನೆಗಳನ್ನು ನಗರಗಳಿಗೆ ಅಲ್ಪ ವೇಳೆಯಲ್ಲಿ ಸಾಗಿಸುವುದರಲ್ಲಿ ವ್ಯಾಪಾರೋದ್ಯಮಿಗಳಿಗೆ, ರೈತರಿಗೆ, ಮೋಟಾರು ವಾಹನ ಪ್ರೋತ್ಸಾಹದಾಯಕವಾಗಿದೆ" ಇವು ವಿಶ್ವೇಶ್ವರಯ್ಯನವರ ತೂಕದ ವಾಕ್ಯಗಳು.

1911ರಲ್ಲಿ ಮೈಸೂರು ಪಡೆದಿದ್ದುದು 411 ಮೈಲಿಗಳ ರೈಲು ಮಾರ್ಗ. ಮೈಸೂರು ಸಂಸ್ಥಾನ ಕನಿಷ್ಠ ಒಂದು ಸಾವಿರ ಮೈಲಿಗಳ ಉದ್ದದ ರೈಲುಮಾರ್ಗ ಹೊಂದಬೇಕೆಂಬುದು ಇವರ ಉದ್ದೇಶ. ರೈಲ್ವೆ ಮಾರ್ಗ ನಿರ್ಮಿಸಲು ಸಮೀಕ್ಷಾಕಾರ್ಯ ಕೈಗೊಂಡರು. ಭಾರತ ಸರ್ಕಾರದ ರೈಲ್ವೇ ಅಧಿಕಾರಿಯ ಸೇವೆಯನ್ನು ತಾತ್ಕಾಲಿಕವಾಗಿ ಪಡೆದರು. 1911ಕ್ಕೆ

ಪೂರ್ವಭಾವಿಯಾಗಿ ಮೈಸೂರು ವಿಭಾಗ ರೈಲು ನಡೆಸಿಕೊಂಡು ಬರಲು ಯೋಜನೆ ಸಿದ್ಧಪಡಿಸಿ ಸರ್ಕಾರಕ್ಕೆ ಒಪ್ಪಿಸಿದ್ದರು. ಸರ್ಕಾರ ಮತ್ತು ರೈಲು ಕಂಪೆನಿಯ ಒಪ್ಪಂದ 1937ಕ್ಕೆ ಅಂತ್ಯಗೊಳ್ಳಲಿತ್ತು. 25 ವರ್ಷಗಳ ದೀರ್ಘ ಆಡಳಿತ ನಡೆಸಿ ಅನೇಕರು ಅನುಭವ ಗಳಿಸಿದ್ದರು. ಕಂಪನೆಯಿಂದ ಸರ್ಕಾರ ಆಡಳಿತ ವಹಿಸಿಕೊಂಡರೆ ಆಡಳಿತ ನಡೆಸಲು ತೊಂದರೆಯಾಗದೆಂಬ ವಾದ ಮುಂದಿಟ್ಟರು.

1914ರಲ್ಲಿ 249 ಮೈಲಿ ಉದ್ದದ ರೈಲು ಮಾರ್ಗವನ್ನು ಸಂಸ್ಥಾನದಲ್ಲಿ ನಿರ್ಮಿಸಲು ಭಾರತ ಸರ್ಕಾರ ಅನುಮತಿ ಕೊಟ್ಟಿತು. ಬೆಂಗಳೂರಿನಿಂದ ಮದರಾಸು ಪ್ರಾಂತದ ಹೊಸೂರಿಗೆ 30.69 ಮೈಲಿಗಳ ಮಾರ್ಗದ ಯೋಜನೆ ಸಿದ್ಧವಾಯಿತು. ಇದಲ್ಲದೆ 146 ಮೈಲಿಗಳ ಉದ್ದದ ಇತರ ಮಾರ್ಗಗಳ ಯೋಜನೆಯೂ ಸಿದ್ಧವಾಯಿತು. ಇವೆಲ್ಲವೂ ಭಾರತ ಸರ್ಕಾರದ ಅಧೀನದ ರೈಲ್ವೆ ಬೋರ್ಡಿನ ಮಂಜೂರಾತಿ ಪಡೆಯ ಬೇಕಾಗಿತ್ತು. 1918ರಲ್ಲಿ ಮೈಸೂರು ಸರ್ಕಾರದ ವಶಕ್ಕೆ ಬೀರೂರು, ಶಿವಮೊಗ್ಗ, ಬೆಂಗಳೂರು, ಮೈಸೂರು, ಮೈಸೂರು–ನಂಜನಗೂಡು ವಿಭಾಗಗಳೂ ಬಂದವು.

ವ್ಯಾಪಾರ ಸ್ಥಳವಾದ ಅರಸೀಕೆರೆ, ಬೆಂಗಳೂರು ಮತ್ತು ಮೈಸೂರು ನಗರಗಳಿಂದ ಹೆಚ್ಚು ಕಡಿಮೆ ಸಮಾನಾಂತರದಲ್ಲಿವೆ. ಆದರೆ ಮೈಸೂರಿನ ಪ್ರಯಾಣಿಕರು ಬೆಂಗಳೂರು ಮಾರ್ಗವಾಗಿ ಅರಸೀಕೆರೆಗೆ ಹೋಗಬೇಕಾಗಿತ್ತು. ಅರಸೀಕೆರೆ ಬೆಂಗಳೂರು–ಪುಣೆ ಮಾರ್ಗದಲ್ಲಿ ಒಂದು ಮುಖ್ಯ ನಿಲ್ದಾಣ. ಮೈಸೂರಿನಿಂದ ಅರಸೀಕೆರೆಗೆ ನೇರ ರೈಲು ಮಾರ್ಗ ನಿರ್ಮಿಸುವುದರಿಂದ ಪುಣೆ, ಶಿವಮೊಗ್ಗ ಕಡೆ ಸಾಗಲು ಅನುಕೂಲವಾಗುತ್ತದೆ ಎಂದು ಈ ಮಾರ್ಗದ ನಿರ್ಮಾಣ ಕಾರ್ಯವನ್ನು 1913ರಲ್ಲಿ ಪ್ರಾರಂಭಿಸಲಾಯಿತು. ಈ ನಿರ್ಮಾಣ ಕಾರ್ಯ ಇಂಜಿನಿಯರುಗಳ ಪ್ರತಿಭೆಗೆ ಸವಾಲಾಗಿತ್ತು. ಆದರೂ ಯಶಸ್ವಿಯಾಗಿ ಈ ಮಾರ್ಗ ನಿರ್ಮಾಣ ಆಯಿತು.

ಮೈಸೂರಿನಿಂದ ಈರೋಡಿಗೆ ರೈಲು ಮಾರ್ಗ ನಿರ್ಮಿಸುವ ಆಸೆ ವಿಶ್ವೇಶ್ವರಯ್ಯನವರದಾಗಿತ್ತು. ಇದರಿಂದ ದಕ್ಷಿಣದ ಸುಪ್ರಸಿದ್ಧ ಯಾತ್ರಾ

ಸ್ಥಳಗಳಿಗೆ, ಕೈಗಾರಿಕಾ ಕೇಂದ್ರವಾದ ಕೊಯಮತ್ತೂರಿಗೆ ನೇರ ಸಂಚರಿಸ ಬಹುದು ಎನ್ನುವುದು ಅವರ ಉದ್ದೇಶ. ಇಂದೂ ಈ ಮಾರ್ಗದ ನಿರ್ಮಾಣ ಆಗಿಲ್ಲ. ಚಿಕ್ಕಜಾಜೂರು–ಚಿತ್ರದುರ್ಗ, ಬೆಂಗಳೂರು–ಚಿಕ್ಕಬಳ್ಳಾಪುರ–ಕೋಲಾರ ಮಾರ್ಗಗಳು ಇವರ ಕಾಲದಲ್ಲೇ ಸಿದ್ಧ ವಾದವು. ಆಡಳಿತ ಕೇಂದ್ರವಾದ ಬೆಂಗಳೂರಿನಿಂದ ಪ್ರತಿ ಜಿಲ್ಲೆಯ ಮುಖ್ಯ ಪಟ್ಟಣಕ್ಕೂ ರೈಲು ಮಾರ್ಗ ನಿರ್ಮಿಸುವುದು ಇವರ ಗುರಿಯಾಗಿತ್ತು. ವಿಶ್ವೇಶ್ವರಯ್ಯನವರು ಸಂಸ್ಥಾನದ ಆಡಳಿತ ಸೂತ್ರ ವಹಿಸಿಕೊಂಡಾಗ ಇದ್ದ ರೈಲು ಮಾರ್ಗದ ಉದ್ದ 411 ಮೈಲಿ. ಅವರು ನಿವೃತ್ತರಾಗುವ ಕಾಲಕ್ಕೆ 616 ಮೈಲಿಗಳಾಗಿದ್ದವು. 46 ಮೈಲಿಗಳ ಮಾರ್ಗ ನಿರ್ಮಾಣ ಹಂತದಲ್ಲಿತ್ತು.

ವಿಶ್ವೇಶ್ವರಯ್ಯನವರು ಈ ಕೆಳಕಂಡ ರೈಲು ಮಾರ್ಗಗಳನ್ನು ನಿರ್ಮಿಸಲು ಹವಣಿಸುತ್ತಿದ್ದರು.

ಮೈಸೂರಿನಿಂದ ಹಾಸನದ ಮಾರ್ಗವಾಗಿ ಅರಸೀಕೆರೆ.

ಬೆಂಗಳೂರು – ಚಿಕ್ಕಬಳ್ಳಾಪುರ – ಕೋಲಾರ – ಬೌರಿಂಗ್‌ಪೇಟೆ.

ಚಿತ್ರದುರ್ಗ – ಚಿಕ್ಕಜಾಜೂರು.

ಅರಸೀಕೆರೆ – ಹಾಸನ – ಮಂಗಳೂರು.

ಚಿಕ್ಕಮಗಳೂರು – ಕಡೂರು.

ಹಾಸನ – ಚಿಕ್ಕಮಗಳೂರು.

ತರೀಕೆರೆ – ನರಸಿಂಹರಾಜಪುರ (ಹಬೆಯ ಟ್ರಾಂ).

ನರಸಿಂಹರಾಜಪುರ – ಶೃಂಗೇರಿ.

ಶಿವಮೊಗ್ಗ – ಭಟ್ಕಳ.

ತಡಸ – ಹೆಬ್ಬೆ.

ಮೈಸೂರು – ಕಾಕನಕೋಟೆ.

ಮೈಸೂರು – ಕೊಡಗು – ವೀರರಾಜಪೇಟೆ.

ಮೈಸೂರು – ಈರೋಡು.

ಬೆಂಗಳೂರು – ಹೊಸೂರು – ಸೇಲಂ.

ತರೀಕೆರೆ – ನರಸಿಂಹರಾಜಪುರ ಮಾರ್ಗ ಹಬೆಯ ಎಂಜಿನ್

ಸಹಾಯದಿಂದ ಸಾಗುವ ಟ್ರಾಂ ಆಗಿತ್ತು. ಆದ ಕಾರಣ ಇಂಡಿಯಾ ಸರ್ಕಾರದ ಅನುಮತಿ ಅನಗತ್ಯವಾಗಿತ್ತು. ಹಾಗಾಗಿ ಬೇಗನೆ ನಿರ್ಮಿಸಲ್ಪಟ್ಟಿತ್ತು. ಇಲ್ಲಿ ಕಾಣಿಸಿದ ರೈಲು ಮಾರ್ಗಗಳಲ್ಲಿ ಚಿಕ್ಕಜಾಜೂರು - ಚಿತ್ರದುರ್ಗ, ಬೆಂಗಳೂರು - ಚಿಕ್ಕಬಳ್ಳಾಪುರ - ಕೋಲಾರ ಅವರ ಅವಧಿಯಲ್ಲೇ ಪೂರ್ಣಗೊಂಡವು. ಬೀರೂರು - ಶಿವಮೊಗ್ಗ - ತಾಳಗುಪ್ಪ; ನಂಜನಗೂಡು-ಚಾಮರಾಜನಗರ ಮತ್ತು ಇತ್ತೀಚೆಗೆ ಹಾಸನ-ಮಂಗಳೂರು ರೈಲ್ವೆ ಮಾರ್ಗಗಳು ಪೂರ್ಣಗೊಂಡಿವೆ.

ಬೆಂಗಳೂರು ನಗರದ ಸುಗಮ ಸಂಚಾರಕ್ಕೆ ವಿದ್ಯುತ್ ಚಾಲಿತ 'ಟ್ರಾಂ' ಸೌಲಭ್ಯ ಕಲ್ಪಿಸಿಕೊಡಲು ಉದ್ದೇಶಿಸಿದ್ದರು. ನಕ್ಷೆ ಮತ್ತು ಅಂದಾಜು ಸಿದ್ಧವಾದವು. ಯುದ್ಧದ ಪರಿಣಾಮದಿಂದ ಬೇಕಾದ ಸರಕು ಸಾಮಗ್ರಿಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುವುದು ಕಠಿಣವಾಯಿತು. ಯೋಜನೆ ಕೈಗೂಡಲಿಲ್ಲ.

ಮೈಸೂರಿಗೆ ಸಮುದ್ರತೀರದ ಬಂದರು ಇಲ್ಲದೆ ಆಮದು ರಫ್ತಿಗೆ ಅನುಕೂಲವಿಲ್ಲ. ಸಮುದ್ರದಾಚೆಯ ದೇಶಗಳೊಡನೆ ವ್ಯಾಪಾರ ಬೆಳೆಸಲು ರೇವು ಪಟ್ಟಣ ತುಂಬಾ ಸಹಕಾರಿ. ಹೊರ ವ್ಯಾಪಾರ ಮದರಾಸು, ಬೊಂಬಾಯಿ ಬಂದರುಗಳ ಮೂಲಕ ನಡೆಯಬೇಕಾಗಿತ್ತು. ಇದನ್ನು ಮನಗಂಡ ವಿಶ್ವೇಶ್ವರಯ್ಯನವರು ಅರಬ್ಬೀ ಸಮುದ್ರದ ದಡದಲ್ಲಿರುವ ಭಟ್ಕಳ ಬಂದರು ನಿರ್ಮಿಸಲು ಯೋಗ್ಯವಾದ ಸ್ಥಳವೆಂದು ತೀರ್ಮಾನಿಸಿದರು. ದೊಡ್ಡ ಹಡಗುಗಳು ಭಟ್ಕಳ ತೀರದಿಂದ ಒಂದು ಮೈಲು ದೂರದಲ್ಲಿ ಲಂಗರು ಹಾಕುತ್ತವೆ. ತೀರಪ್ರದೇಶಕ್ಕೆ ಬರಲು ಸಮುದ್ರ ಸಾಕಷ್ಟು ಆಳವಿಲ್ಲ. ಅಲ್ಲಿ ಬಂದರು ಕಟ್ಟೆ ನಿರ್ಮಾಣ ಮಾಡಲು 1918ರಲ್ಲಿ ಒಂದು ಕೋಟಿ ರೂಪಾಯಿ ಅಂದಾಜು ಮಾಡಲಾಯಿತು.

ಆದರೆ ಆಗ ಭಟ್ಕಳ ಬೊಂಬಾಯಿ ಪ್ರಾಂತಕ್ಕೆ ಸೇರಿತ್ತು. ವಿಶ್ವೇಶ್ವರಯ್ಯನವರು ಭಟ್ಕಳವನ್ನು ನಿರಂತರ ಗುತ್ತಿಗೆಗೆ ಪಡೆಯುವ ಆಸೆ ಹೊಂದಿದ್ದರು. ಯೋಜನೆಯ ವಿವರ, ನಕ್ಷೆ, ಅಂದಾಜು ಎಲ್ಲವನ್ನೂ ಭಾರತ ಸರ್ಕಾರದ ಅಂಗೀಕಾರಕ್ಕೆ ಕಳಿಸಿಕೊಟ್ಟರು. ವೆಚ್ಚ ಮೈಸೂರು ಸರ್ಕಾರ ವಹಿಸಿಕೊಳ್ಳಲು

ಸಿದ್ಧವಿದೆ ಎಂದರು. ಮೈಸೂರಿನ ಮಹಾರಾಜರು, ಪ್ರಜೆಗಳು ಇದಕ್ಕೆ ಬೆಂಬಲ ಘೋಷಿಸಿದರು. ಆದರೆ ಬ್ರಿಟಿಷ್ ಪ್ರಭುತ್ವ ಭಟ್ಕಳವನ್ನು ಮೈಸೂರಿಗೆ ಬಿಟ್ಟುಕೊಡಲು ಒಪ್ಪಲಿಲ್ಲ. ಮೈಸೂರಿನ ಆಸೆ ಮಣ್ಣು ಗೂಡಿತು. ಇಂದು ಭಟ್ಕಳ ಕರ್ನಾಟಕದ ಒಂದು ಭಾಗವಾಗಿದೆ. ಆದರೆ, ಅಲ್ಲಿ ಬಂದರು ನಿರ್ಮಾಣ ಆಗಿಲ್ಲ.

## 13. ಸಂಪದಭಿವೃದ್ಧಿಯ ಸಾಧನೆ

ಆಧುನಿಕ ಯುಗದಲ್ಲಿ ಯಾವ ದೇಶವೂ ವ್ಯವಸಾಯ ಒಂದರಿಂದಲೇ ಅಭಿವೃದ್ಧಿ ಹೊಂದಲು ಮತ್ತು ಪ್ರಭಾವಶಾಲಿಯಾಗಲು ಸಾಧ್ಯವಿಲ್ಲ. ಇದು ವಿಶ್ವೇಶ್ವರಯ್ಯನವರ ನಿರ್ದಿಷ್ಟ ನಿಲುವು. ಬೇರೆ ಮುಂದುವರಿದ ದೇಶಗಳ ದಾರಿಯಲ್ಲೇ ಭಾರತವೂ ಸಾಗಬೇಕು ಎಂಬುದು ಅವರ ಆಸೆ.

ನಿಜವಾಗಿ ನೋಡಿದರೆ ಪಂಚವಾರ್ಷಿಕ ಯೋಜನೆಯ ಪಿತಾಮಹ ವಿಶ್ವೇಶ್ವರಯ್ಯನವರು. 1911 ರಲ್ಲಿ ದಿವಾನರಾಗಿದ್ದಾಗ ಪಂಚವಾರ್ಷಿಕ ಯೋಜನೆಯನ್ನು ಪ್ರಾರಂಭಿಸಿದರು. ಆಗ 'ಯೋಜನೆ' ಎಂಬ ಪದ ಹೆಚ್ಚು ಬಳಕೆಯಲ್ಲಿರಲಿಲ್ಲ. 1911 ರಲ್ಲಿ ಮೈಸೂರಿನ ಆರ್ಥಿಕ ಸಮ್ಮೇಳನ ಏರ್ಪಡಿಸಿದರು.

ಇದು ವಾರ್ಷಿಕ ಕೂಟ ಆಯಿತು. 1920ರಲ್ಲಿ 'ಭಾರತದ ಪುನರ್‌ರಚನೆ' ಎಂಬ ಗ್ರಂಥವನ್ನು ಲಂಡನ್ನಿನಿಂದ ಪ್ರಕಟಿಸಿದರು. 1934ರಲ್ಲಿ 'ಭಾರತದ ಆರ್ಥಿಕಾಭಿವೃದ್ಧಿ ಯೋಜನೆ' ಬೆಳಕು ಕಂಡಿತು. ಇದಲ್ಲದೆ ಇವರು ಬರೆದ ಹಲವು ಪುಸ್ತಕಗಳನ್ನು ಬೊಂಬಾಯಿಯ ಅಖಿಲ ಭಾರತ ಉತ್ಪಾದಕರ ಸಂಘ ಪ್ರಕಟಿಸಿದೆ. ಆರ್ಥಿಕ ಯೋಜನೆಯ ಅವರ ಗ್ರಂಥದಲ್ಲಿ ವ್ಯವಸಾಯ, ಕೈಗಾರಿಕೆ, ಭಾರೀ ಮತ್ತು ಮಧ್ಯಮ ಹಾಗೂ ಸಣ್ಣ ಶ್ರೇಣಿಯ ಕೈಗಾರಿಕೆ; ಸಂಚಾರ ಸೌಲಭ್ಯ; ವಿದ್ಯುಚ್ಛಕ್ತಿ ಉತ್ಪಾದನೆ ಮತ್ತು ಹಂಚಿಕೆ; ವ್ಯಾಪಾರ, ವಾಣಿಜ್ಯ, ಆಮದು – ರಫ್ತು, ಜಲಮಾರ್ಗ ಸಂಚಾರ, ರೈಲು ರಸ್ತೆಯ ಸಂಚಾರ; ಬ್ಯಾಂಕಿಂಗ್ ವ್ಯವಹಾರ, ಟಂಕಸಾಲೆ ಇವುಗಳಿಗೆ

ವಿಶೇಷ ಗಮನ ಹರಿಸಲಾಗಿದೆ. ಜೊತೆಗೆ ಸಾಮಾಜಿಕ ಹಾಗೂ ರಾಜಕೀಯ ಸ್ವಾತಂತ್ರ್ಯದ ವಿಶ್ಲೇಷಣೆ ಮಾಡಲಾಗಿದೆ.

ಕೈಗಾರಿಕೋದ್ಯಮ ಬೆಳೆಯಲು ಹೊರಗಿನಿಂದ ಸರಕು ತರಿಸುವುದರಿಂದ ಹೆಚ್ಚಿನ ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ವಿದೇಶಗಳಿಂದ ಸಿದ್ಧ ಸಾಮಗ್ರಿ ಆಮದು ಮಾಡಿಕೊಳ್ಳುವುದರಲ್ಲಿ ಎರಡು ಬಗೆಯ ಹಾನಿ ಸಂಭವಿಸುತ್ತದೆ. ನಮ್ಮ ಹಣ ಹೊರಕ್ಕೆ ಹರಿದುಹೋಗುವುದು ಒಂದು ಹಾನಿ. ಇಲ್ಲಿಯ ಕೈಗಾರಿಕೆಯ ಬೆಳವಣಿಗೆಯಿಂದ ಆಗುತ್ತಿದ್ದ ಗಳಿಕೆ, ಅನುಭವ ಕಳೆದುಕೊಳ್ಳುವುದು ಇನ್ನೊಂದು ಹಾನಿ. ರಾಷ್ಟ್ರೀಯ ವರಮಾನ ದ್ವಿಗುಣಗೊಳಿಸಲು ರಾಜ್ಯಗಳಿಗೆ ಪಂಚವಾರ್ಷಿಕ ಯೋಜನೆ ಮತ್ತು ಕೇಂದ್ರಕ್ಕೆ ದಶವಾರ್ಷಿಕ ಯೋಜನೆ ಅಗತ್ಯ ಎಂಬುದು ಅವರ ಸಲಹೆ. ಪ್ರತಿಯೊಂದು ಪ್ರಾಂತ ಅಥವಾ ರಾಜ್ಯಕ್ಕೆ ಕನಿಷ್ಠ ಒಂದಾದರೂ ಮೂಲ ಕೈಗಾರಿಕೆ, ಪ್ರತಿ ಜಿಲ್ಲೆಗೂ ಎರಡಾದರೂ ದೊಡ್ಡ ಕೈಗಾರಿಕೆ, ಪ್ರತಿ ತಾಲ್ಲೂಕಿಗೂ ಒಂದು ಕೈಗಾರಿಕಾ ಘಟಕ ಆಗಬೇಕು. ಇದರಿಂದ ಪ್ರದೇಶಗಳ ಮಧ್ಯೆ ಸಮತೋಲನ ಸಾಧಿಸಬಹುದು ಎಂದು ಚಿಂತಿಸುತ್ತಿದ್ದರು.

ವಿಶ್ವೇಶ್ವರಯ್ಯನವರ ಆರ್ಥಿಕ ಯೋಜನೆ ಒಮ್ಮುಖವಾದುದಲ್ಲ. ಸರ್ವಾಂಗ ಪರಿಪುಷ್ಟವಾದುದು. ಒಂದಕ್ಕೊಂದು ಹೊಂದಿಕೊಂಡಿರುವಂಥದು. ಗ್ರಾಮಾಭಿವೃದ್ಧಿ ಎಂದರೆ, ರೈತನ ಏಳಿಗೆ, ಗ್ರಾಮ ಕೈಗಾರಿಕೆಗಳ ಪುನರುಜ್ಜೀವನ. ರೈತನ ಮುಖ್ಯ ಆಧಾರ ಪಶು ಸಂಪತ್ತು. ಒಳ್ಳೆಯ ತಳಿಯ ಅಭಿವೃದ್ಧಿಗಾಗಿ ಕ್ರಮ ಕೈಗೊಂಡರು. ರೈತನಿಗೆ ಉತ್ತಮ ನೇಗಿಲು ಮತ್ತು ಇತರ ಉಪಕರಣಗಳು ಬೇಕು. ಬೊಕ್ಕಸ ಬರಿದು. ಹಣ ಸಾಲದು. ಸಾಲ ಎತ್ತು; ಕಂದಾಯ, ಆದಾಯ ಹೆಚ್ಚಿಸು. ಜನರಲ್ಲಿ ಕೂಡಿಟ್ಟ ಹಣ ಇದೆಯೆ? ಸೇವಿಂಗ್ಸ್ ಬ್ಯಾಂಕ್ ಸ್ಥಾಪಿಸು. ಮಿತವ್ಯಯ ಮಾಡು, ವ್ಯಾಪಾರ, ವಾಣಿಜ್ಯ ಹೆಚ್ಚಿಸು. ವ್ಯಾಪಾರಕ್ಕೆ ಬಂಡವಾಳ ಬೇಡವೇ? ಬೇಕು, ಬ್ಯಾಂಕ್ ಸ್ಥಾಪಿಸು. ಇವೆಲ್ಲವೂ ಅವರ ಅನಿಸಿಕೆಗಳು.

ವರ್ತಕರಲ್ಲಿ ಒಮ್ಮತ ಬೇಕು. ವಾಣಿಜ್ಯ ಸಂಘ ಏರ್ಪಡಿಸು. ವರ್ತಕರಲ್ಲಿ ತಿಳಿವು ಸಾಲದು. ವಾಣಿಜ್ಯ ಶಾಲೆ ಸ್ಥಾಪಿಸು. ಕಲಿ, ಅನುಭವ ಗಳಿಸು.

ಪಶ್ಚಿಮದ ದೇಶಗಳಿಗೆ ಹೋಗಿ ಬಾ. ಗ್ರಾಮೀಣರಿಗೆ ಅರಿವು ಕಡಿಮೆ. ಪ್ರಚಾರೋಪನ್ಯಾಸ, ಯಕ್ಷಿಣಿದೀಪ (ಮ್ಯಾಜಿಕ್ ಲ್ಯಾಂಟರ್ನ್)ದ ಉಪನ್ಯಾಸ, ರಾತ್ರಿ ಶಾಲೆ, ಸಂಚಾರಿ ಪುಸ್ತಕ ಭಂಡಾರ ಇವುಗಳಿಂದ ಅರಿವು ಮೂಡಿಸು. ಜನತೆಯ ಸಹಕಾರವಿಲ್ಲದೆ ಸರ್ಕಾರದ ಕೆಲಸ ಸುಗಮವಾಗಿ ಸಾಗದು.

ಸರ್ಕಾರ ಇರುವುದು ಜನಸೇವೆಗಾಗಿ. ಒಂದಕ್ಕೊಂದು ಪೋಷಕ. ಜನರಿಗೆ ತಿಳಿವಳಿಕೆ ಕೊಡಲು, ಅವರಿಂದ ಸಹಕಾರ ಪಡೆಯಲು ಸಂಪದಭಿವೃದ್ಧಿ ಸಮ್ಮೇಳನ, ಸಹಕಾರ ಸಮ್ಮೇಳನ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಸಮ್ಮೇಳನ ನಡೆಸಿದರು.

ಜಡತೆ ಮತ್ತು ಸೋಮಾರಿತನ ನಮ್ಮ ದೊಡ್ಡ ಶತ್ರುಗಳು ಎನ್ನುತ್ತಿದ್ದರು ವಿಶ್ವೇಶ್ವರಯ್ಯನವರು. ನಮ್ಮವರು ಕಷ್ಟಪಟ್ಟು ಮೈದಣಿಸಿ, ಬೆವರು ಸುರಿಸಿ, ಬುದ್ಧಿ ವ್ಯಯಿಸಿ ಕೆಲಸ ಮಾಡುವವರಲ್ಲ. ಯೂರೋಪಿಗಿಂತ ಇಲ್ಲಿ ಕೆಲಸದ ಅವಧಿ ಕಡಿಮೆ. ರಜಾದಿನಗಳು ಹೆಚ್ಚು. ದೇಶದ ಅತಿ ಘೋರ ವ್ಯಾಧಿ ಕ್ರಿಯಾಶೂನ್ಯತೆ, ಆಲಸ್ಯತನ, ಎಲ್ಲಕ್ಕೂ ಹಣೇಬರಹ ಎನ್ನುವ ನಿರ್ವೀರ್ಯ ಮನೋಭಾವ. ದುಡಿಯದೆ ತುಕ್ಕು ಹಿಡಿದು ಸಾಯುವುದಕ್ಕಿಂತ ದೇಹವನ್ನು ದಣಿಸಿ, ಗಂಧದ ಕೊರಡಿನಂತೆ ಸವೆಸುವುದು ಲೇಸು. ಇದು ಅವರ ಜೀವನ ಧರ್ಮ.

ಕೈಗಾರಿಕೆಗಳಿಗೆ ಬಂಡವಾಳ ಒದಗಿಸಲು 1913ರಲ್ಲಿ ಮೈಸೂರು ಬ್ಯಾಂಕ್ ಅಸ್ತಿತ್ವಕ್ಕೆ ಬಂತು. 1914ರಲ್ಲಿ ಬೆಂಗಳೂರಿನಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ವಿದ್ಯಾಸಂಸ್ಥೆ ಸ್ಥಾಪಿತವಾಯಿತು. ಮಲೆನಾಡಿನ ಪ್ರದೇಶಗಳನ್ನು ಅಭಿವೃದ್ಧಿಪಡಿಸಲು ಮಲೆನಾಡು ಅಭಿವೃದ್ಧಿ ಸಮಿತಿ ರಚಿತವಾಯಿತು. 1915ರಲ್ಲಿ ಮೈಸೂರು ವಿಶ್ವವಿದ್ಯಾಲಯ ಉದಯಿಸಿತು. ವರುಷ ವರುಷಕ್ಕೆ ಹೊಸ ಕೈಗಾರಿಕೆಗಳು ತಲೆ ಎತ್ತುತ್ತಿದ್ದವು. 1916ರಲ್ಲಿ ರೇಷ್ಮೆ ಇಲಾಖೆ, ಸರ್ಕಾರಿ ಸಾಬೂನು ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಚರ್ಮ ಹದಮಾಡುವ ಕಾರ್ಖಾನೆ ಸರ್ಕಾರದಿಂದ ಪ್ರಾರಂಭವಾದವು. ಖಾಸಗಿ ಉದ್ಯಮಿಗಳಿಗೆ ಸರ್ಕಾರ ಅಥವಾ

ಬ್ಯಾಂಕಿನಿಂದ ಸುಲಭ ದರದಲ್ಲಿ ಬಂಡವಾಳ ಒದಗಿಸುವ ಕ್ರಮ ಜಾರಿಗೆ ತಂದರು.

ಮೈಸೂರು ಗಂಧದ ನಾಡು ಎಂದು ಕೀರ್ತಿ ಗಳಿಸಿದೆ. ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಇಲ್ಲಿನ ಕಾಡುಗಳಲ್ಲಿ ಗಂಧದ ಮರಗಳು ಬೆಳೆಯುತ್ತವೆ. ಮೈಸೂರಿನ ಗಂಧದ ಸಾಬೂನು ಜಗದ್ವಿಖ್ಯಾತವಾಗಿದೆ. ಆದರೆ, ಮೊದಮೊದಲು ನಮ್ಮ ಜನ ಗಂಧ ತೇದು ಬಳಸಿಕೊಳ್ಳುವುದನ್ನು ತಿಳಿದಿದ್ದರೇ ಹೊರತು ಅದರಿಂದ ಎಣ್ಣೆ ತೆಗೆಯುವ ಕ್ರಮ ತಿಳಿದಿರಲಿಲ್ಲ. ಗಂಧದ ಮರದ ತುಂಡುಗಳನ್ನು ಫ್ರಾನ್ಸ್, ಜರ್ಮನಿ, ಇಟಲಿ ದೇಶಗಳಿಗೆ ಕಳುಹಿಸಿ ಅಲ್ಲಿಂದ ಎಣ್ಣೆ ತರಿಸಿಕೊಳ್ಳಲಾಗುತ್ತಿತ್ತು. ಬೆಂಗಳೂರಿನಲ್ಲಿರುವ ಭಾರತೀಯ ವಿಜ್ಞಾನ ಮಂದಿರಕ್ಕೆ ಗಂಧದ ಕೊರಡಿನಿಂದ ಎಣ್ಣೆ ತೆಗೆಯುವ ವಿಧಾನ ಕಂಡು ಹಿಡಿಯುವಂತೆ ವಿಶ್ವೇಶ್ವರಯ್ಯನವರು ತಿಳಿಸಿದರು. ವಿಜ್ಞಾನಿಗಳು ಪ್ರಯೋಗದಲ್ಲಿ ಯಶಸ್ವಿಯಾದರು. ಸರ್ಕಾರ ಗಂಧದ ಎಣ್ಣೆ ಕಾರ್ಖಾನೆಯನ್ನು ಮೈಸೂರಿನಲ್ಲಿ ಸ್ಥಾಪಿಸಿತು. ಸರ್ಕಾರದ ಸಹಾಯದಿಂದ ಮೈಸೂರು, ಚನ್ನಪಟ್ಟಣ, ತೀರ್ಥಹಳ್ಳಿಗಳಲ್ಲಿ ಮಂಗಳೂರು ಮಾದರಿಯ ಹೆಂಚು ತಯಾರಿಸುವ ಕಾರ್ಖಾನೆಗಳು ಸ್ಥಾಪಿತವಾದವು. ಮೈಸೂರು, ಹಾಸನ, ತುಮಕೂರು, ಶಿವಮೊಗ್ಗ ಜಿಲ್ಲೆಗಳಲ್ಲಿ ಅಭ್ರಕ, ಕಲ್ನಾರು, ಮ್ಯಾಂಗನೀಸ್ ಮೊದಲಾದ ಖನಿಜ ತೆಗೆಯುವ ಕಾರ್ಯ ಚುರುಕುಗೊಂಡಿತು. ಮೈಸೂರಿನಲ್ಲಿ ಮಹಾರಾಜರ ಕೃಪಾಪೋಷಿತ ಶ್ರೀ ಕೃಷ್ಣರಾಜೇಂದ್ರ ಬಟ್ಟೆ ಗಿರಣಿ ತಲೆ ಎತ್ತಿತು. ಉತ್ಸಾಹಿ ವರ್ತಕರು 1916ರಲ್ಲಿ ಬೆಂಗಳೂರಿನಲ್ಲಿ ವಾಣಿಜ್ಯ ಸಂಘ ರೂಪಿಸಿಕೊಂಡರು. ಅಧಿಕಾರಿಗಳು ದಣಿವಾರಿಸಿಕೊಳ್ಳಲು ಸೆಂಚುರಿ ಕ್ಲಬ್, ಮಹಿಳೆಯರಿಗಾಗಿ ಲೇಡೀಸ್ ಕ್ಲಬ್ ಅಥವಾ ಮಹಿಳಾ ಸಮಾಜ ಪ್ರಾರಂಭವಾದವು. ಗ್ರಾಮೋದ್ಯೋಗ, ಗೃಹ ಕೈಗಾರಿಕೆ, ಹೊಟೇಲು, ವಸತಿಗೃಹ, ಮುದ್ರಣಾಲಯ, ಸಣ್ಣ ಕೈಗಾರಿಕೆ ಇವುಗಳಿಗೆ ಧನ ಸಹಾಯ ನೀಡುವ ಪದ್ಧತಿ ಆಚರಣೆಗೆ ಬಂತು. ಕೆಟ್ಟುಹೋದ ಯಂತ್ರಗಳ ದುರಸ್ತಿ, ಬಿಡಿ ಭಾಗಗಳ ತಯಾರಿಕೆಗಾಗಿ ಬೆಂಗಳೂರಿನಲ್ಲಿ ಸೆಂಟ್ರಲ್ ಇಂಡಸ್ಟ್ರಿಯಲ್

ವರ್ಕ್ ಷಾಪ್ ಪ್ರಾರಂಭವಾಯಿತು. ಪ್ರತಿಯೊಂದು ಜಿಲ್ಲಾ ಕೇಂದ್ರದಲ್ಲೂ ಇದೇ ಮಾದರಿ ಆದರೆ ಅಲ್ಪ ಪ್ರಮಾಣದ ವರ್ಕ್‌ಷಾಪ್ ಸ್ಥಾಪಿಸಲು ಹಣ ಮಂಜೂರಾಯಿತು. ಮೈಸೂರಿನ ಇಂಡಸ್ಟ್ರಿಯಲ್ ಸ್ಕೂಲ್ ಚಾಮ ರಾಜೇಂದ್ರ ಕಲಾ ಶಾಲೆಯಾಗಿ ಮೇಲಂತಸ್ತಿಗೆ ಏರಿತು. ವಿದ್ಯುತ್ತಿನ



ಚಾಮರಾಜೇಂದ್ರ ಕಲಾ ಶಾಲೆ, ಮೈಸೂರು

ಬಳಕೆಯ ಭತ್ತದ ಗಿರಣಿ, ಎಣ್ಣೆ ಗಿರಣಿ, ಕಬ್ಬಿನ ರಸ ಹಿಂಡುವ ಗಿರಣಿ, ಉತ್ತಮ ದರ್ಜೆಯ ಬೆಲ್ಲ ತಯಾರಿಸುವ ಆಲೆಮನೆ, ನೇಯ್ಗೆ ಕಾರ್ಖಾನೆಗಳು ಅನೇಕ ಕಡೆಗಳಲ್ಲಿ ಸ್ಥಾಪಿತವಾದವು. ವಿದ್ಯುತ್, ಡೀಸಲ್, ಎಣ್ಣೆ, ಆವಿ ಸಹಾಯದಿಂದ ನೀರೆತ್ತಿ ಹಾಯಿಸುವ ಸಾಧನ ಬಳಕೆಗೆ ಬಂತು. ಬೆಂಗಳೂರಿನಲ್ಲಿ ಮೈಸೂರು ಆರ್ಟ್ಸ್ ಮತ್ತು ಕ್ರಾಫ್ಟ್ ಡಿಪೋ ಸ್ಥಾಪಿತವಾಯಿತು. ದೊಡ್ಡಬಳ್ಳಾಪುರದ ಸೀರೆ, ಜಂಖಾನ, ಬೆಂಗಳೂರಿನ ರೇಷ್ಮೆ, ಕಲಾಬತ್ ಸೀರೆ, ಕಡಬ, ನಂಜನಗೂಡಿನ ಚಾಪೆ ಜನಪ್ರಿಯ ವಾದವು. ನಮ್ಮ ನಾಡಿನಲ್ಲಿ ತಯಾರಿಸುವ ವಸ್ತುಗಳನ್ನು ಪ್ರೋತ್ಸಾ ಹಿಸಲು, ಸಾರ್ವಜನಿಕರ ಗಮನಕ್ಕೆ ತರಲು, ಮಾರುಕಟ್ಟೆ ಒದಗಿಸಲು

ಮೈಸೂರಿನಲ್ಲಿ ದಸರಾ ವಸ್ತುಪ್ರದರ್ಶನ ವರ್ಷ ವರ್ಷವೂ ನಡೆಯುವಂತೆ ಏರ್ಪಾಡಾಯಿತು. ಇದೆಲ್ಲಕ್ಕೆ ಸಹಯೋಗವಾಗಿ ಇಂಗ್ಲಿಷ್ ಮತ್ತು ಕನ್ನಡದಲ್ಲಿ 'ಸಂಪದಭಿವೃದ್ಧಿ' ಎಂಬ ಪತ್ರಿಕೆ ಸರ್ಕಾರದ ವತಿಯಿಂದ ಹೊರಬರತೊಡಗಿತು.

ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ವಿಶ್ವೇಶ್ವರಯ್ಯನವರಿಗೆ ಅಪಾರ ವಿಶ್ವಾಸ. ವಿಜ್ಞಾನ ಹೊಸ ವಿಶ್ವವನ್ನು ಸೃಷ್ಟಿಸುತ್ತದೆ. ಅದನ್ನು ಅನಾದರಣೆ ಮಾಡುವುದರಿಂದ ಅನಾಹುತವಾದೀತು. ವಿಜ್ಞಾನ ಮತ್ತು ತಂತ್ರಜ್ಞಾನ ಸಹೋದರರಂತೆ ಸಮಭಾಗಿಗಳು. ಇವುಗಳ ಸಮನ್ವಯವೇ ಔದ್ಯೋಗೀಕರಣ. ಭಾರತದ ಭವಿಷ್ಯಕ್ಕೆ "ಔದ್ಯೋಗೀಕರಣ ಇಲ್ಲವೇ ವಿನಾಶ" ಎಂದು ಅವರು ದೃಢವಾಗಿ ನಂಬಿದ್ದರು.

## 14. ಸಾಮಾಜಿಕ ಸುಧಾರಣೆ

ಸಮಾಜದ ಎಲ್ಲಾ ಕ್ಷೇತ್ರಗಳಲ್ಲೂ ಕಂಡುಬರುವ ದೋಷ ಅಸಮಾನತೆ. ಮೇಲು – ಕೀಳು, ಬಡವ – ಬಲ್ಲಿದ, ವಿವೇಕಿ – ಅವಿವೇಕಿ, ಪಂಡಿತ – ಪಾಮರ, ಸ್ಪೃಶ್ಯ– ಅಸ್ಪೃಶ್ಯ, ಹಿಂದೂ – ಮುಸ್ಲಿಂ, ಈ ಬಗೆಯ ಭಿನ್ನತೆ, ಅಸಮಾನತೆ ಎಲ್ಲಾ ಕಡೆ ಕಾಣುತ್ತಿದೆ. ಇದನ್ನು ಹೋಗಲಾಡಿಸಲು ಗೌತಮ ಬುದ್ಧನಿಂದ ಹಿಡಿದು ಮಹಾತ್ಮಾ ಗಾಂಧಿಯವರೆಗೆ ಅನೇಕರು ಹೋರಾಡುತ್ತಾ ಬಂದಿದ್ದಾರೆ.

ಮೈಸೂರು ಸಂಸ್ಥಾನದ ದಿವಾನರಾದ ಪ್ರಾರಂಭದಲ್ಲಿಯೇ ವಿಶ್ವೇಶ್ವರಯ್ಯನವರು ಹಿಂದುಳಿದ ವರ್ಗದ ಕಲ್ಯಾಣಕ್ಕಾಗಿ ಅನೇಕ ಕ್ರಮಗಳನ್ನು ಕೈಗೊಂಡರು. ವಿದ್ಯೆ ಕಲಿಯಲು ಸಮಾನ ಅವಕಾಶ ಒದಗಿಸಿಕೊಟ್ಟರು. ಮಾನವೀಯತೆಗೆ ಮೆರಗುಕೊಟ್ಟರು. ಕರ್ಮ, ಹಣೆಬರಹ, ಪೂರ್ವಜನ್ಮದ ಫಲ, ಅದೃಷ್ಟ, ಅನುಭವಿಸಿಯೇ ತೀರಬೇಕು ಎಂಬ ಮನೋಭಾವದ ವಿರುದ್ಧ ಪ್ರತಿಭಟಿಸಿದರು.

ವಿಶ್ವೇಶ್ವರಯ್ಯನವರದು ಒಂಟಿ ಜೀವನ. ಸಂಕೋಚ ಪ್ರವೃತ್ತಿ. ಹತ್ತು ಜನರೊಡನೆ ಕೂಡಿ ಬಾಳುವ ಸ್ವಭಾವದವರಲ್ಲ. ವ್ಯಕ್ತಿಯ ನಡತೆ, ಜೀವನಕ್ರಮ, ಚಾರಿತ್ರ್ಯವನ್ನು ಗಮನಿಸಿ ಅಂಥವರ ಸ್ನೇಹ ಮಾತ್ರ ಬೆಳೆಸುವರು. ಇಂಥವರು ಹತ್ತಾರು ಜನ ಸೇರಿ ವಿಶ್ರಾಂತಿ ಪಡೆಯಲು ಕ್ಲಬ್ ಸ್ಥಾಪಿಸಿರುವುದು ಆಶ್ಚರ್ಯವೆನಿಸುತ್ತದೆ. ಈ ಪ್ರಯತ್ನವನ್ನು ಅವರು ಮೊದಲು ಮಾಡಿದ್ದು ಪುಣೆಯಲ್ಲಿ. ಅನಂತರ ಅವರು ಬೆಂಗಳೂರು, ಮೈಸೂರುಗಳಲ್ಲೂ ಕ್ಲಬ್‌ಗಳನ್ನು ಸ್ಥಾಪಿಸಿದರು. ಪುಣೆಯಲ್ಲಿ ಅವರು ಸ್ಥಾಪಿಸಿದ ಕ್ಲಬ್‌ನ ಹೆಸರು 'ಡೆಕ್ಕನ್ ಕ್ಲಬ್'. ಅವರು ಮೂರು ವರ್ಷ ಕಾಲ ಅದರ ಕಾರ್ಯದರ್ಶಿಯೂ ಆಗಿದ್ದರು.

ಅಸ್ಪೃಶ್ಯ ವಿದ್ಯಾರ್ಥಿಗಳಿಗೆ ಪ್ರತ್ಯೇಕ ವಿದ್ಯಾರ್ಥಿನಿಲಯಗಳನ್ನು ಸ್ಥಾಪಿಸಿದರು. ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮಂಜೂರು ಮಾಡಿದರು. ಬಾಲ್ಯ ವಿವಾಹ ನಿಷೇಧಿಸಿದರು. ವಿಧವಾ ವಿವಾಹ ಮಂಜೂರು ಮಾಡಿದರು. ಮಹಿಳೆಯರ ಶಿಕ್ಷಣಕ್ಕೆ ವಿಶೇಷ ಗಮನವಿತ್ತರು. ಪ್ರಾಥಮಿಕ ವಿದ್ಯಾಭ್ಯಾಸ ಕೆಲವೆಡೆ ಕಡ್ಡಾಯ ಮಾಡಿದರು. ಮುಸಲ್ಮಾನರ ಶಿಕ್ಷಣಕ್ಕೆ ಶ್ರಮಿಸಿದರು. ಸಮಾಜದಲ್ಲಿ ಸರ್ವರಿಗೂ ಸಮಾನ ಅವಕಾಶವಿರಬೇಕೆಂದು ನಿರಂತರ ಪ್ರಚಾರ ನಡೆಸಿದರು. ಮೂಢನಂಬಿಕೆ, ಸಮಾಜದ ದೋಷಗಳನ್ನು ಖಂಡಿಸುತ್ತಿದ್ದರು.

ಹೆಣ್ಣುಮಕ್ಕಳು ಶಾಲೆಗೆ ಹೋಗುವುದು, ಪರಪುರುಷರೊಡನೆ ಮಾತನಾಡುವುದು, ಅಪರಾಧವೆನಿಸಿಕೊಂಡಿದ್ದ ಕಾಲ ಅದು. ಇಂಥ ಕಾಲದಲ್ಲಿ ಮಹಿಳೆಯರಿಗಾಗಿ ಪ್ರತ್ಯೇಕ ಶಾಲೆ, ಪ್ರತ್ಯೇಕ ವಿದ್ಯಾರ್ಥಿನಿಲಯ ಸ್ಥಾಪಿಸಿದರು. ಮಹಿಳೆಯರಿಗೆ ಉಚಿತ ಶಿಕ್ಷಣ ವ್ಯವಸ್ಥೆ ಮಾಡಿದರು. ಘೋಷಾ ಅಥವಾ ಪರ್ದಾ ಪದ್ಧತಿ ಆಚರಿಸುತ್ತಿದ್ದ ಮಹಿಳೆಯರನ್ನು ಶಾಲೆಗೆ ಒಯ್ದು, ಮನೆಗೆ ತಂದು ಬಿಡಲು ಗಾಡಿ ವ್ಯವಸ್ಥೆ ಮಾಡಿದರು. ಮಹಿಳಾ ಶಿಕ್ಷಕರನ್ನೇ ಮಹಿಳೆಯರಿಗೆ ನೇಮಿಸಿದರು. ಉರ್ದು ಕಲಿಯುವವರಿಗೆ, ಮಹಮ್ಮದೀಯರಿಗೆ ಪ್ರತ್ಯೇಕ ಶಾಲೆ. ಆದರೆ ಪ್ರತ್ಯೇಕತಾ ಭಾವನೆ ಬಹಳ ದೂರ ಬೆಳೆಯಲು ಬಿಡಲಿಲ್ಲ. ಮುಸ್ಲಿಂ

ಶಾಲೆಗಳಿಗೆ ಪ್ರತ್ಯೇಕ ಮುಸ್ಲಿಂ ಇನ್ಸ್‌ಪೆಕ್ಟರುಗಳು ಬೇಕೆಂಬ ಬೇಡಿಕೆಯನ್ನು ತಿರಸ್ಕರಿಸಿದರು. ಆ ಕಾಲದಲ್ಲಿ ಅಮರಕೋಶ ಕಂಠಪಾಠ ಮಾಡುವುದು ಕಡ್ಡಾಯವಾಗಿತ್ತು. ಸಂಸ್ಕೃತ ಪದಗಳನ್ನು ಮುಸ್ಲಿಂ ವಿದ್ಯಾರ್ಥಿಗಳು ಉಚ್ಚರಿಸಲು ಕಷ್ಟಪಡುತ್ತಿದ್ದರು. ಇದನ್ನು ಗಮನಿಸಿ ಕಡ್ಡಾಯವಾಗಿ ಎಲ್ಲರೂ ಅಮರಕೋಶ ಕಲಿಯಬೇಕೆಂಬ ನಿಯಮ ರದ್ದು ಮಾಡಿದರು. ಪ್ರತ್ಯೇಕ ಭಾವನೆ ತೊರೆಯಲು ತಿಳಿಸಿದರು. ಅನ್ಯಮತೀಯರೊಂದಿಗೆ ಸಹೋದರ ಭಾವನೆಯಿಂದ ಬಾಳುವಂತೆ ಬೋಧಿಸುತ್ತಿದ್ದರು.

ಹಿಂದೂಗಳಲ್ಲಿ ಆಚರಣೆಯಲ್ಲಿರುವ ಸ್ಪೃಶ್ಯ, ಅಸ್ಪೃಶ್ಯ, ಭೇದವನ್ನು ತೊಡೆದುಹಾಕಲು ವಿಶ್ವೇಶ್ವರಯ್ಯನವರು ತುಂಬಾ ಶ್ರಮಿಸಿದರು. ಅಸ್ಪೃಶ್ಯತೆ ಮತ್ತು ಸಮಾಜದ ಇತರ ದೋಷಗಳ ನಿವಾರಣೆಗಾಗಿ 1937ರಲ್ಲಿ ಸಿವಿಕ್ ಅಂಡ್ ಸೋಷಿಯಲ್ ಪ್ರೋಗ್ರೆಸಿವ್ ಅಸೋಸಿಯೇಷನ್ ಸ್ಥಾಪಿತವಾಯಿತು. ಸಮಾಜ ಸುಧಾರಣೆಗಾಗಿ ಸಂಘಕ್ಕೆ ಅವರಿತ್ತ ಸಲಹೆಗಳು ಹೀಗಿವೆ: ಮೊದಲಿಗೆ ಅಂತ್ಯಜರ ಉದ್ಧಾರ. ಉಪನಯನ, ಮದುವೆ, ಮರಣ ಮತ್ತು ಇತರ ಶುಭಾಶುಭ ಕಾರ್ಯಗಳಲ್ಲಿ ದುಂದುವೆಚ್ಚ ಮಾಡದಿರುವುದು. ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ಹದಿನಾಲ್ಕಕ್ಕೆ ಹೆಚ್ಚಿಸುವುದು. ಸ್ವಯಂ ಗಳಿಕೆಯಿಂದ ಸಂಸಾರ ನಿರ್ವಹಿಸುವ ಶಕ್ತಿ ಪಡೆಯುವವರೆಗೆ ಯುವಕರು ಮದುವೆ ಮಾಡಿಕೊಳ್ಳದಿರುವುದು. ಎಲ್ಲಾ ಜಾತಿ, ಪಂಗಡಗಳಲ್ಲಿ ಅನ್ಯೋನ್ಯತೆ, ಸ್ನೇಹಭಾವ ಬೆಳೆಸಲು ಪ್ರೋತ್ಸಾಹ, ದೇಶೀಯ ವ್ಯಾಯಾಮ ಪದ್ಧತಿಗೆ ಉತ್ತೇಜನ, ಕುಡಿತ ತಪ್ಪಿಸುವುದು, ಸಮಾಜ ಸುಧಾರಣೆಯ ಶಾಸನ ಮಾಡಲು ಜನಾಭಿಪ್ರಾಯ ರೂಢಿಸುವುದು.

ಎಂಟು ವರ್ಷಕ್ಕೆ ಹೆಣ್ಣು ಮಗುವಿಗೆ ಮದುವೆ ಮಾಡುವ ಪದ್ಧತಿ ಹಿಂದೂಗಳಲ್ಲಿತ್ತು. ಇದರಿಂದ ಚಿಕ್ಕ ವಯಸ್ಸಿನಲ್ಲೇ ಮಹಿಳೆಯರು ಮಕ್ಕಳನ್ನು ಹೆರುತ್ತಾರೆ. ದೈಹಿಕವಾಗಿ ಬೇಗನೆ ದುರ್ಬಲರಾಗುತ್ತಾರೆ. ಶಿಶು ಮರಣ ಸಂಖ್ಯೆ ಬೆಳೆಯುತ್ತದೆ. ಬಾಲ್ಯ ವಿಧವೆಯರ ಪ್ರಮಾಣ ಹೆಚ್ಚುತ್ತದೆ. ಇದೆಲ್ಲಾ ನಿಲ್ಲಬೇಕು. ಚಿಕ್ಕ ವಯಸ್ಸಿನ ವಿಧವೆಯರನ್ನು ವಿರೂಪಗೊಳಿಸುವ

ಕ್ರೂರ ಪದ್ಧತಿ ಕೂಡಲೇ ತೊಲಗಬೇಕು. ವರದಕ್ಷಿಣೆ ಪದ್ಧತಿ ಹೋಗಬೇಕು. ಬಹು ಹತ್ತಿರದ ಸಂಬಂಧ ಬೆಳೆಸುವುದನ್ನು ಕಡಿಮೆಮಾಡಿ ವೈವಾಹಿಕ ಕ್ಷೇತ್ರ ವಿಸ್ತರಿಸಬೇಕು. ಹತ್ತಿರದ ಸಂಬಂಧದ ಮದುವೆಯಿಂದ ಹುಟ್ಟುವ ಮಕ್ಕಳು ದೃಢಕಾಯರಾಗಿರುವುದಿಲ್ಲ. ಬುದ್ಧಿಮಾಂದ್ಯದ ಮಕ್ಕಳು ಹುಟ್ಟಬಹುದು ಎಂದು ಪ್ರತಿಪಾದಿಸುತ್ತಿದ್ದರು.

ಆಧುನಿಕ ಗೃಹವಿಜ್ಞಾನದಲ್ಲಿ ಮಹಿಳೆಯರು ಶಿಕ್ಷಣ ಪಡೆಯಲು ಯೋಗ್ಯ ವ್ಯವಸ್ಥೆ ಮಾಡಿದರು. ಸ್ವಂತ ಗಳಿಕೆಯಿಂದ ಜೀವನ ಸಾಗಿಸಲು ತಕ್ಕ ಶಿಕ್ಷಣ ಪಡೆಯಬೇಕೆಂಬುದು ಅವರ ಬಯಕೆ. ಪತಿಯನ್ನು ಕಳೆದುಕೊಂಡ ಸತಿ ಪಡುತ್ತಿದ್ದ ಬವಣೆಯನ್ನು ಅವರು ಮನಗಂಡಿದ್ದರು. ಮಧ್ಯಮ ಮತ್ತು ಕೆಳದರ್ಜೆಯ ಮಹಿಳೆಯರು ಸ್ವಂತ ಶಕ್ತಿಯಿಂದ ಸಂಪಾದನೆ ಮಾಡಲು ಅವರಿಗೆ ಹಲವಾರು ಗೃಹ ಕೈಗಾರಿಕೆ ಮತ್ತು ಉದ್ಯಮಗಳಲ್ಲಿ ಶಿಕ್ಷಣ ಕೊಡಿಸುವ ವ್ಯವಸ್ಥೆ ಮಾಡಲಾಯಿತು.

ವಿಶ್ವೇಶ್ವರಯ್ಯನವರು ಸಾರ್ವಜನಿಕ ಸ್ವಚ್ಛತೆಗೆ ಹೆಚ್ಚು ಆದ್ಯತೆ ಕೊಡುತ್ತಿದ್ದರು. ಅದಕ್ಕಾಗಿ ಸ್ಥಳೀಯ ಸಂಸ್ಥೆಗಳು ಸಾರ್ವಜನಿಕರಲ್ಲಿ ತಿಳಿವು ಮೂಡಿಸುವ ಕೆಲಸ ಮಾಡಬೇಕೆಂದು ಹೇಳುತ್ತಿದ್ದರು. ಕಂಡಕಂಡಲ್ಲಿ ಮಲ ವಿಸರ್ಜನೆ, ಮೂತ್ರ ವಿಸರ್ಜನೆ, ಉಗುಳುವುದು, ಹೇಸಿಗೆ ಮಾಡುವುದು, ಅನಾರೋಗ್ಯಕರ ತಿಂಡಿ - ತಿನಿಸು ತಿನ್ನುವುದು, ಹಣ್ಣು - ಹಂಪಲು ತಿಂದು ಸಿಕ್ಕಲ್ಲಿ ಎಸೆಯುವುದು, ಇವನ್ನು ಕಂಡರೆ ಅವರಿಗಾಗುತ್ತಿರಲಿಲ್ಲ. ಸೋಮಾರಿತನ, ಜಡತ್ವ, ಭಿಕ್ಷಾಟನೆಯನ್ನು ಕಂಡರೂ ಅವರಿಗಾಗದು. ಭಿಕ್ಷಾವೃತ್ತಿ ನಿವಾರಿಸಲು ಶಾಸನ ಮಾಡಬೇಕೆಂಬುದು ಅವರ ಸಲಹೆ. ಧರ್ಮ, ನೀತಿ, ಕಟ್ಟಳೆ, ಸಂಪ್ರದಾಯ ಇವು ಹಾಸುಹೊಕ್ಕಾಗಿರುವ ಈ ದೇಶದಲ್ಲಿ ಜನರ ಸಹಕಾರವಿಲ್ಲದೆ ಶಾಸನಬಲದಿಂದ ಮಾತ್ರ ಭಿಕ್ಷಾಟನೆ ಹೋಗಲಾಡಿಸುವುದು ಕಠಿಣ ಎಂದೂ ತಿಳಿದಿದ್ದರು.

ಅತಿಯಾಗಿ ಬೆಳೆಯುತ್ತಿದ್ದ ಜನಸಂಖ್ಯೆಯನ್ನು ಗಮನಿಸಿ ಮಿತ ಸಂತಾನ ಪ್ರಚಾರ ಸಂಸ್ಥೆ ಸ್ಥಾಪಿಸುವ ಸಲಹೆ ನೀಡಿದ್ದರು. ವಿಶ್ವೇಶ್ವರಯ್ಯನವರಿಗೆ ಸಂತಾನ ಪ್ರಾಪ್ತಿ ಇಲ್ಲ. ಅದಕ್ಕೆ ಈ ವೈರಾಗ್ಯ ಬೋಧನೆ ಎಂದು ಕೆಲವರು ಹಾಸ್ಯ ಮಾಡಿದ್ದುಂಟು. ಚಿಕ್ಕ ಸಂಸಾರ, ಚೊಕ್ಕ ಸಂಸಾರ. ಚಿಕ್ಕ ಸಂಸಾರದಲ್ಲಿ

ಮಕ್ಕಳ ಪಾಲನೆ, ಪೋಷಣೆ, ಶಿಕ್ಷಣ ಇವಕ್ಕೆ ಹೆಚ್ಚು ಗಮನ ಕೊಡಬಹುದು. ಶಾಸ್ತ್ರೀಯ, ವೈಜ್ಞಾನಿಕ ಮಿತಸಂತಾನ ನಮ್ಮ ಜನರ ಮಧ್ಯೆ ಪ್ರಚಾರ ವಾಗಬೇಕು ಎನ್ನುತ್ತಿದ್ದರು.

ಸಾರ್ವಜನಿಕರ ಸಹಾಯ, ಸಹಾನುಭೂತಿ, ಸಹಕಾರವಿಲ್ಲದೆ ಸಮಾಜ ಸುಧಾರಣೆ ಸುಗಮವಾಗಿ ಸಾಗದು. ಈ ಸುಧಾರಣೆ ತರಲು ಧೈರ್ಯ, ಸಾಹಸ, ಜಾಣ್ಮೆ ಬೇಕು. ಸಾವಿರಾರು ವರ್ಷಗಳ ಸಂಪ್ರದಾಯ, ಜಾರಿಯಲ್ಲಿದ್ದ ಕಾಲದಲ್ಲಿ ಸಾಮಾಜಿಕ ಸುಧಾರಣೆಗೆ ಯತ್ನಿಸಿ, ಬಹುಮಟ್ಟಿನ ಗೆಲುವು ಸಾಧಿಸಿದ ವಿರಳರಲ್ಲಿ ವಿಶ್ವೇಶ್ವರಯ್ಯನವರೂ ಒಬ್ಬರು.

## 15. ಆಡಳಿತ ಸುಧಾರಣೆ

ವಿಶ್ವೇಶ್ವರಯ್ಯನವರು ಪ್ರಜಾಪ್ರಭುತ್ವವಾದಿ. ರಾಜ್ಯಾಡಳಿತದಲ್ಲಿ ಪ್ರಜೆ ಹೆಚ್ಚಿನ ಪಾತ್ರ ವಹಿಸಬೇಕೆಂಬುದು ಅವರ ನಿಲುವು. ಹಿಂದೆ ದಿವಾನರಾಗಿದ್ದ ರಂಗಾಚಾರ್ಲು ಅವರು ಸ್ಥಾಪಿಸಿದ ಪ್ರಜಾಪ್ರತಿನಿಧಿ ಸಭೆ ಕೇವಲ 'ಅರಿಕೆ' ಅಥವಾ ನಿವೇದನಾ ಸಭೆಯಾಗಿತ್ತು. ಸಭೆಗೆ ಬಂದ ಪ್ರತಿನಿಧಿಗಳಿಗೆ ಮೃಷ್ಟಾನ್ನ ಭೋಜನ, ಶಾಲು ಜೋಡಿ, ಬಂಗಾರದ ಮೊಹರು ಬಹುಮಾನವಾಗಿ ಲಭಿಸುತ್ತಿತ್ತು. ರಾಜ್ಯ ವ್ಯವಸ್ಥೆಯಲ್ಲಿ ಭಾಗವಹಿಸಲು ಪ್ರತಿನಿಧಿಗಳಿಗೆ ಸಾಕಷ್ಟು ಅವಕಾಶ ದೊರೆಯುತ್ತಿರಲಿಲ್ಲ. ವಿಶ್ವೇಶ್ವರಯ್ಯನವರು ಮಹಾರಾಜರ ಸಮ್ಮತಿಯಿಂದ ಇದೆಲ್ಲಾ ಮಾರ್ಪಡಿಸಿ ಸಭೆಯನ್ನು ನಿಜವಾದ ಅಧಿಕಾರವಾಣಿಯುಳ್ಳ ಪ್ರಜಾಪ್ರತಿನಿಧಿ ಸಭೆಯಾಗಿ ಪರಿವರ್ತಿಸಿದರು. ತಮ್ಮ ಪ್ರತಿನಿಧಿಗಳನ್ನು ಆರಿಸುವ ಅಧಿಕಾರ ಪ್ರತಿನಿಧಿಗಳಿಗೆ ದೊರೆಯಿತು. ಚುನಾಯಿತ ಪ್ರತಿನಿಧಿಗಳು ಸರ್ಕಾರದ ಆಡಳಿತದ ವಿಷಯದಲ್ಲಿ ಪ್ರಶ್ನೆ ಕೇಳಿ ಉತ್ತರ ಪಡೆಯುವ ಮತ್ತು ಸರ್ಕಾರಕ್ಕೆ ಶಿಫಾರಸು ಮಾಡುವ ಅಧಿಕಾರ ಪಡೆದರು. ರಾಜ್ಯದ ಆಯವ್ಯಯ ಪರಿಶೀಲಿಸುವ ಅಧಿಕಾರ ಸಹ ಸಭೆ ಪಡೆಯಿತು.

ಅಲ್ಲಿಯವರೆಗೆ ರಾಜ್ಯದ ಆಯವ್ಯಯ ಅಂದಾಜು ಪಟ್ಟಿ ಇಂಗ್ಲಿಷ್ ಭಾಷೆಯಲ್ಲಿ ಅಚ್ಚಾಗುತ್ತಿತ್ತು. ನೂರರಲ್ಲಿ ಆರು ಜನ ಸಹ ಇಂಗ್ಲಿಷ್ ಭಾಷೆ ಬಲ್ಲವರಿಲ್ಲ. ಇವರ ಕಾಲದಲ್ಲಿ ಅದು ಮೊಟ್ಟಮೊದಲು ಕನ್ನಡದಲ್ಲಿ ಮುದ್ರಿತವಾಗತೊಡಗಿತು. ಆಯವ್ಯಯದ ಅಂದಾಜುಪಟ್ಟಿ ಪರಿಷ್ಕರಿಸಲು ವರ್ಷದಲ್ಲಿ ಎರಡು ಸಾರಿ ಸಭೆ ಸೇರುವಂತೆ ವ್ಯವಸ್ಥೆ ಮಾಡಲಾಯಿತು. ಪ್ರಜಾಪ್ರತಿನಿಧಿ ಸಭೆಯಿಂದ ನ್ಯಾಯ ವಿಧಾಯಕರ ಸಭೆಗೆ ಹೆಚ್ಚು ಪ್ರತಿನಿಧಿಗಳನ್ನು ಆರಿಸುವ ಹಕ್ಕು ದೊರೆಯಿತು. ಪ್ರತಿನಿಧಿಗಳು ಮೊದಲಿಗಿಂತಲೂ ನಿರ್ಭಯ, ನಿರ್ದಾಕ್ಷಿಣ್ಯಗಳಿಂದ ಸರ್ಕಾರವನ್ನು ಟೀಕಿಸತೊಡಗಿದರು. ವಿಶ್ವೇಶ್ವರಯ್ಯನವರು ಈ ಟೀಕೆಗಳನ್ನು ಸಮಾಧಾನದಿಂದ ಕೇಳಿ ಸಮಸ್ಯೆ ಪರಿಹರಿಸಲು ಯತ್ನಿಸುತ್ತಿದ್ದರು.

ಕೃಷ್ಣರಾಜಸಾಗರ, ಭದ್ರಾವತಿ ಕಬ್ಬಿಣ ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆ, ಸಾಬೂನು ಕಾರ್ಖಾನೆ, ವಿಶ್ವವಿದ್ಯಾಲಯ ಮುಂತಾದ ಯೋಜನೆಗಳಿಗೆ ಬೇಕಾದ ಹಣವನ್ನು ಅಂದಾಜುಪಟ್ಟಿ ತಯಾರಿಸಿ ಪ್ರಜಾಪ್ರತಿನಿಧಿ ಸಭೆಯ ಮುಂದೆ ಒಪ್ಪಿಗೆಗೆ ಇಡುತ್ತಿದ್ದರು. ಇದು ದುಂದುಗಾರಿಕೆ. ಹಣ ಒದಗಿಸುವುದು ಎಲ್ಲಿಂದ ಎಂಬ ಚಿಂತೆ ಪ್ರತಿನಿಧಿಗಳಿಗೆ. ಆದಾಯ, ವ್ಯಯ ದೇಶದ ಆರ್ಥಿಕ ಪ್ರಗತಿಯ ಸೂಚಕ. ವ್ಯಯ ಹೆಚ್ಚಿದಂತೆ ಆದಾಯವೂ ಹೆಚ್ಚುತ್ತದೆ. ಇಂದಲ್ಲ ನಾಳೆ ಜನ ಇದರಿಂದ ಪ್ರಯೋಜನ ಪಡೆಯುವುದು ಖಂಡಿತ. ಇದು ವಿಶ್ವೇಶ್ವರಯ್ಯನವರ ದಿಟ್ಟ ನಿಲುವು. ಈ ದಿಟ್ಟತನವೇ ಅವರಿಗೆ ವರಮಾನ ತೆರಿಗೆಯನ್ನು ಜಾರಿಗೆ ತರಲು ಧೈರ್ಯ ಕೊಟ್ಟಿತು. ಅವರ ಎಂಟು ವರ್ಷಗಳ ದಿವಾನ್‌ಗಿರಿಯ ಅವಧಿಯಲ್ಲಿ ಆದಾಯಕ್ಕಿಂತ ವ್ಯಯ ಯಾವ ವರ್ಷದಲ್ಲೂ ಹೆಚ್ಚು ಆಗಿಲ್ಲ.

ಆಡಳಿತವನ್ನು ಉತ್ತಮಗೊಳಿಸಲು ಮೈಸೂರು ಸಿವಿಲ್ ಸರ್ವೀಸ್ (ನಾಗರಿಕ ಸೇವೆ) ಪರೀಕ್ಷೆಯನ್ನು, ಇಂಡಿಯನ್ ಸಿವಿಲ್ ಸರ್ವೀಸ್ ಪದ್ಧತಿಗೆ ಅನುಗುಣವಾಗಿ ಪುನರುಜ್ಜೀವನಗೊಳಿಸಿದರು. ಸಮರ್ಥರೂ, ನೀತಿವಂತರೂ ಆದ ತರುಣರನ್ನು ಸಿವಿಲ್ ಸರ್ವೀಸ್ ಮೂಲಕ ಆಯ್ದು ಉನ್ನತ ಅಧಿಕಾರಗಳಿಗೆ ನೇಮಿಸುವುದು ಅವರ ಆಸೆಯಾಗಿತ್ತು. ಜಾತಿ -

ಭೇದ ಮಾಡದೆ ಸಾಮರ್ಥ್ಯ ಮತ್ತು ಗುಣಾವಗುಣ ಅವಲಂಬಿಸಿ ಅಧಿಕಾರಿಗಳನ್ನು ನೇಮಿಸಲು ಅವರು ಬಯಸುತ್ತಿದ್ದರು. ಅವರ ಈ ಬಯಕೆಯೇ ಮುಂದೆ ಅವರಿಗೆ ಮುಳುವಾಗಿ ದಿವಾನ್ ಪದವಿಯನ್ನೇ ಕಳೆದುಕೊಳ್ಳುವಂತೆ ಆಯಿತು.

ಸ್ಥಳೀಯ ಸಂಸ್ಥೆಗಳ ಅಧಿಕಾರ ವ್ಯಾಪ್ತಿ ಮತ್ತು ಅಧಿಕಾರ ಹೆಚ್ಚು ಮಾಡುವ ಕ್ರಮ ಕೈಗೊಳ್ಳಲಾಯಿತು. ಸ್ವಯಂ ಆಡಳಿತಕ್ಕಾಗಿ ಸ್ಥಳೀಯ ಸಂಸ್ಥೆಗಳು ಹಣಕಾಸು ಸಂಗ್ರಹಿಸಲು ಹೆಚ್ಚು ಅವಕಾಶ ಕಲ್ಪಿಸಲಾಯಿತು. ಸ್ಥಳೀಯ ಸಂಸ್ಥೆಗಳಲ್ಲಿ ಖಾಸಗಿ ಸದಸ್ಯರ ಪ್ರಮಾಣ ಹೆಚ್ಚಿಸಿ ಅಧಿಕ ಹೊಣೆ ಮತ್ತು ಅಧಿಕಾರ ಕೊಡಲಾಯಿತು. ಅದುವರೆಗೂ ಜಿಲ್ಲಾಧಿಕಾರಿಗಳು ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗುತ್ತಿದ್ದರು. ಇದನ್ನು ತಪ್ಪಿಸಿ ಖಾಸಗಿ ಸದಸ್ಯನನ್ನೇ ಜಿಲ್ಲಾ ಬೋರ್ಡುಗಳ ಅಧ್ಯಕ್ಷರಾಗಿ ನೇಮಿಸಲಾಯಿತು. ಕ್ರಮೇಣ ಅಧ್ಯಕ್ಷರನ್ನು ಚುನಾಯಿಸಿಕೊಳ್ಳುವ ಅಧಿಕಾರವೂ ಪ್ರಾಪ್ತವಾಯಿತು. ಪ್ರಜಾಪ್ರಭುತ್ವದಲ್ಲಿ ವಿಶ್ವೇಶ್ವರಯ್ಯನವರಿಗಿದ್ದ ವಿಶ್ವಾಸವನ್ನು ಇದು ವ್ಯಕ್ತಪಡಿಸುತ್ತದೆ.

ಬ್ಯಾಂಕ್ ಮತ್ತು ಬ್ಯಾಂಕ್ ವ್ಯವಹಾರ ಭಾರತ ಸ್ವಾತಂತ್ರ್ಯ ಗಳಿಸಿ ಹಲವು ವರ್ಷಗಳಾದ ಮೇಲೆ ರಾಷ್ಟ್ರೀಕೃತವಾದವು. ಆದರೆ ವಿಶ್ವೇಶ್ವರಯ್ಯನವರ ದೂರದೃಷ್ಟಿ ಈ ಕಾರ್ಯವನ್ನು ಐವತ್ತು ವರ್ಷಗಳ ಹಿಂದೆಯೇ ಸಾಧಿಸಿತ್ತು. ಮೈಸೂರು ಸರ್ಕಾರ ತನ್ನದೇ ಆದ ವಿಮಾ ಸಂಸ್ಥೆ ಪಡೆಯಿತು. ಮೈಸೂರು ಬ್ಯಾಂಕು ಸರ್ಕಾರದ ಖಜಾನೆಯ ಕೆಲಸವನ್ನು ನಿರ್ವಹಿಸ ತೊಡಗಿತು. ಲೆಕ್ಕಪತ್ರಗಳ ತಪಾಸಣೆ ನಡೆಸಿ ಲೋಪದೋಷ ಕಂಡುಹಿಡಿಯುವ ಮತ್ತು ಇಲಾಖೆಯ ದಕ್ಷತೆ, ಸಾಮರ್ಥ್ಯ ಅಳೆಯುವ 'ಎಫಿಷಿಯನ್ಸಿ ಆಡಿಟ್' ಪದ್ಧತಿ ಜಾರಿಗೆ ತಂದರು.

ವಿದ್ಯಾಭ್ಯಾಸ ಎಂದರೆ ಅರ್ಜಿಸುವ, ಉದ್ಯೋಗ ಪಡೆದುಕೊಳ್ಳುವ, ಬದುಕಿ ಬಾಳುವ ಸಾಧನ ಎಂಬ ಭಾವನೆ ಬಲವಾಗಿ ಬೆಳೆದಿದೆ. ಆದರೆ ಅದಕ್ಕೆ ವಿಶ್ವೇಶ್ವರಯ್ಯನವರ ಉತ್ತರ ಹೀಗಿದೆ: "ಶಾಲೆಯಲ್ಲಿ ಶಿಕ್ಷಣ ಪಡೆದು ಶಾಲೆ ಬಿಡುವಾಗ ಪ್ರತಿಯೊಬ್ಬ ತರುಣನ ನಡೆನುಡಿಯಲ್ಲಿ ಹಿತಮಿತ ವಾಕ್‌ಶುದ್ಧಿ; ದೇಶ ಭಕ್ತಿಯಲ್ಲಿ ಸರಿಯಾದ ತಿಳುವಳಿಕೆ; ರಾಜ

ಅಥವಾ ರಾಷ್ಟ್ರಭಕ್ತಿ; ಹೊಸತರ ಅನ್ವೇಷಣೆಯಲ್ಲಿ ಆಸಕ್ತಿ; ಸ್ವಯಂ ಸೇವೆಯಲ್ಲಿ ಸ್ವಾಭಿಮಾನ; ವೇಳೆಯ ಮೌಲ್ಯದ ಅರಿವು; ಶಾಸನ ಮತ್ತು ನೆಮ್ಮದಿಗೆ ಗೌರವ; ಯಾವುದಾದರೂ ಉದ್ಯೋಗ ನಿರ್ವಹಣೆಯಿಂದ ಸುಗಮ ಜೀವನ ಸಾಧಿಸುವ ಸಾಮರ್ಥ್ಯ. ”

ಆರ್ಥಿಕ, ಸಾಮಾಜಿಕ, ರಾಜಕೀಯ, ಆಡಳಿತ ಇವುಗಳ ಸುಧಾರಣೆ, ಕೈಗಾರಿಕೋದ್ಯಮಗಳ ಸ್ಥಾಪನೆ ಮೊದಲಾದ ಕ್ರಮಗಳಿಂದ ಮೈಸೂರು ಮಾದರಿ ಸಂಸ್ಥಾನವಾಗಿ ಬೆಳೆಯಿತು. ಬ್ರಿಟಿಷ್ ಪ್ರಾಂತಗಳಿಗಿಂತ ಮುಂದುವರೆದ ರಾಜ್ಯವೆಂಬ ಕೀರ್ತಿ ಗಳಿಸಿತು. ಇದೆಲ್ಲಾ ಆದದ್ದು ವಿಶ್ವೇಶ್ವರಯ್ಯನವರ ಸಾಮರ್ಥ್ಯದಿಂದ.

## 16. ರಾಜೀನಾಮೆಯ ಪ್ರಕರಣ

ಮಹಾರಾಜರು ದಿವಾನ್ ವಿಶ್ವೇಶ್ವರಯ್ಯನವರಿಗೆ 1914ರ ಜುಲೈ 2ರಂದು ಒಂದು ಪತ್ರ ಬರೆದರು. ಅದರಲ್ಲಿ “ಕಳೆದ ಎರಡು ತಿಂಗಳಿಂದ ನಾನು ಅನುಭವಿಸಿರುವಷ್ಟು ಮನಶ್ಶಾಂತಿಯನ್ನು ಯಾವ ಕಾಲದಲ್ಲೂ ಅನುಭವಿಸಿರಲಿಲ್ಲ. ತಮ್ಮ ದಕ್ಷ ಆಡಳಿತ ಇದಕ್ಕೆ ಕಾರಣ. ಇದೇ ಸ್ಥಿತಿ ದೀರ್ಘಕಾಲ ಮುಂದುವರಿಯಲೆಂದು ಹಾರೈಸುತ್ತೇನೆ” ಎಂದು ಬರೆದಿದ್ದರು. ಆದರೆ ಈ ಆನಂದ ಸ್ವಲ್ಪ ಕಾಲದಲ್ಲೇ ಹಾಲಾಹಲವಾಗಿ ಪರಿಣಮಿಸಿತು.

1916-17ರ ವೇಳೆಗೆ ಪಕ್ಕದ ಮದರಾಸು ಪ್ರಾಂತದಲ್ಲಿ ಬ್ರಾಹ್ಮಣ ವಿರೋಧಿ ಚಳವಳಿ ಹರಡತೊಡಗಿತು. ಅಲ್ಲಿ ಸರ್ಕಾರದ ನೌಕರಿಯಲ್ಲಿ ಬ್ರಾಹ್ಮಣರ ಸಂಖ್ಯೆ ಅಧಿಕವಾಗಿತ್ತು. ಬ್ರಾಹ್ಮಣರಿಗೆ ದೊರೆಯುತ್ತಿದ್ದ ಸೇವಾವಕಾಶ ಕಡಿಮೆ ಮಾಡುವುದು; ಇಂಜಿನಿಯರಿಂಗ್, ವೈದ್ಯಕೀಯ, ಔದ್ಯೋಗಿಕ ಮತ್ತು ಇತರೆ ಕಲಾಶಾಲೆಗಳಲ್ಲಿ ಅವರಿಗೆ ಪ್ರವೇಶಾವಕಾಶ ನಿರ್ಬಂಧಿಸುವುದು; ಈ ರೀತಿಯ ನೀತಿಯನ್ನು ಸರ್ಕಾರ ಅನುಸರಿಸ

ಬೇಕೆಂದು ಬ್ರಾಹ್ಮಣೇತರ ಪಕ್ಷದ ಧೋರಣೆಯಾಗಿತ್ತು. ಇದೇ ನೀತಿಯನ್ನು ಮೈಸೂರು ಸರ್ಕಾರ ಅನುಸರಿಸಬೇಕೆಂದು ಇಲ್ಲಿನ ಬ್ರಾಹ್ಮಣೇತರ ಪಕ್ಷದ ಪ್ರಮುಖರೂ ಪತ್ರಿಕೆಗಳೂ ಒತ್ತಾಯ ಮಾಡತೊಡಗಿದವು. ಬಹು ಸಂಖ್ಯಾತರ ಒತ್ತಾಯಕ್ಕೆ ಮಣಿದು ಮಹಾರಾಜರು ಈ ಬೇಡಿಕೆ ಈಡೇರಿಸಲು ಕೈಗೊಳ್ಳಬೇಕಾದ ಕ್ರಮ ಸೂಚಿಸಲು ಲೆಸ್ಲಿ ಮಿಲ್ಲರ್ ಅಧ್ಯಕ್ಷತೆಯಲ್ಲಿ ಒಂದು ಸಮಿತಿ ನೇಮಿಸಿದರು.

ಇದೇ ಕಾಲಕ್ಕೆ ಕಮಿಷನರುಗಳನ್ನು ನೇಮಿಸುವ ಅವಕಾಶ ಬಂತು. ಪರೀಕ್ಷೆಯಲ್ಲಿ ಗಳಿಸಿದ ಅಂಕ, ಸಾಮರ್ಥ್ಯ, ಯೋಗ್ಯತೆ ಇವುಗಳನ್ನು ಆಧರಿಸಿ ದಿವಾನರು ಆರು ಅಭ್ಯರ್ಥಿಗಳ ಹೆಸರುಗಳನ್ನು ಮಹಾರಾಜರ ಒಪ್ಪಿಗೆಗೆ ಕಳಿಸಿದರು. ಕಾಕತಾಳೀಯ ನ್ಯಾಯದಂತೆ ಇವರೆಲ್ಲರೂ ಬ್ರಾಹ್ಮಣರೇ ಆಗಿದ್ದರು. ಮಹಾರಾಜರಿಗೆ ಅಂದಿನ ವಾತಾವರಣದಲ್ಲಿ ಅದು ಸೂಕ್ತವೆನಿಸಲಿಲ್ಲ. ಪುನರ್ವಿಮರ್ಶಿಸುವಂತೆ ಪಟ್ಟಿಯನ್ನು ಹಿಂದಿರುಗಿಸಿದರು. ಕಡೆಗೆ ಮೂವರನ್ನು ಮಹಾರಾಜರೂ ಮೂವರನ್ನು ದಿವಾನರೂ ನೇಮಿಸುವ ಖಾಜಿ ತೀರ್ಮಾನಕ್ಕೆ ಬರಲಾಯಿತು.

ರೆವಿನ್ಯೂ ಇಲಾಖೆಗೆ ಯೋಗ್ಯರಾದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಇನ್ನೊಂದು ಅವಕಾಶ ಬಂತು. ಮೂರನೇ ಒಂದು ಭಾಗದಷ್ಟು ಸ್ಥಾನಗಳನ್ನು ಬ್ರಾಹ್ಮಣೇತರರಿಗೆ ಮೀಸಲಾಗಿಡಬೇಕೆಂಬುದು ಮಹಾರಾಜರ ಇಷ್ಟ. ಅರ್ಹರಾದ ಸಾಕಷ್ಟು ಬ್ರಾಹ್ಮಣೇತರರು ಇದ್ದರೆ ಅವರಿಗೆ ಪ್ರಥಮ ಅವಕಾಶ ಕೊಡಬೇಕೆಂದು ದಿವಾನರಿಗೆ ಮಹಾರಾಜರು ಅಪ್ಪಣೆ ಹೊರಡಿಸಿದರು.

ಮೈಸೂರು ವಿಶ್ವವಿದ್ಯಾಲಯದ ಎರಡು ಸ್ಥಾನಗಳಿಗೆ ಇಬ್ಬರನ್ನು ಸರ್ಕಾರ ನೇಮಿಸಬೇಕಿತ್ತು. ವಿಶ್ವೇಶ್ವರಯ್ಯನವರು ಒಬ್ಬ ಬ್ರಾಹ್ಮಣ ಮತ್ತೊಬ್ಬ ಬ್ರಾಹ್ಮಣೇತರರ ಹೆಸರುಗಳನ್ನು ಮಹಾರಾಜರ ಒಪ್ಪಿಗೆಗೆ ಕಳಿಸಿಕೊಟ್ಟರು. ಆದರೆ ಇದು ಮಹಾರಾಜರ ಒಪ್ಪಿಗೆ ಪಡೆಯಲಿಲ್ಲ. ಈ ವಿಷಯದಲ್ಲಿ ಅವರಿಬ್ಬರ ಮಧ್ಯೆ ದೀರ್ಘ ಪತ್ರವ್ಯವಹಾರ ನಡೆಯಿತು. ಕಡೆಗೆ ಮಹಾರಾಜರು ಇಬ್ಬರು ಬ್ರಾಹ್ಮಣೇತರರನ್ನು ನೇಮಿಸಿದರು. ವಿಶ್ವೇಶ್ವರಯ್ಯನವರು ಅವರ ಆಣತಿಗೆ ಬಾಗಿ ನಡೆಯಲೇಬೇಕಾಯಿತು.

ಈ ಘಟನೆಗಳಿಂದ ಮಹಾರಾಜರು ಮತ್ತು ದಿವಾನರ ನಡುವೆ ಇದ್ದ ನಂಬಿಕೆ ಸಡಿಲಗೊಂಡಿತ್ತು. ದಿವಾನರ ಉತ್ಸಾಹಕ್ಕೆ ಭಂಗ ಬಂದಿತು. ಹಿಂದುಳಿದ ಪಂಗಡಕ್ಕೆ ಶಿಕ್ಷಣದಲ್ಲಾಗಲೀ, ರಾಜ್ಯಾಡಳಿತದಲ್ಲಾಗಲೀ ಅವಕಾಶ ಕೊಡಬಾರದೆಂಬುದು ಖಂಡಿತ ಅವರ ಉದ್ದೇಶವಾಗಿರಲಿಲ್ಲ. ಹಿಂದುಳಿದವರ ವಿದ್ಯಾಭ್ಯಾಸಕ್ಕಾಗಿ ಇವರು ಮಾಡಿದಷ್ಟು ಪ್ರಯತ್ನ, ಒದಗಿಸಿದಷ್ಟು ಸೌಲಭ್ಯವನ್ನು ಅದುವರೆಗೆ ಯಾರೂ ಮಾಡಿರಲಿಲ್ಲ. ಜಾತಿಮತಗಳ ಆಧಾರದ ಮೇಲೆ ದಕ್ಷರಲ್ಲದವರನ್ನು ಸೇರಿಸುವುದರಿಂದ ಸುಗಮವಾಗಿ ಕೆಲಸ ನಡೆಯಲು ತೊಂದರೆ ಆದೀತೆಂಬ ಶಂಕೆ. ಈ ಕಾರಣಗಳಿಂದ ಮಿಲ್ಲರ್ ಸಮಿತಿಯ ಸ್ಥಾಪನೆ ಇವರಿಗೆ ಸರಿದೋರಲಿಲ್ಲ. ಇದರಿಂದ ಜಾತಿಮತಗಳ ದ್ವೇಷಾಸೂಯೆ ಬೆಳೆಯಲು ಅವಕಾಶ ಮಾಡಿಕೊಟ್ಟಂತಾಗುತ್ತದೆ ಎಂದು ಮಹಾರಾಜರಿಗೆ ಹೇಳಿದರು. ಆದರೆ ಮಹಾರಾಜರು ಅದಕ್ಕೆ ಕಿವಿಗೊಡಲಿಲ್ಲ. ವಿಶ್ವೇಶ್ವರಯ್ಯನವರು ತಮ್ಮನ್ನು ಕೆಲಸದಿಂದ ನಿವೃತ್ತಿಗೊಳಿಸುವಂತೆ ಕೇಳಿಕೊಂಡರು. ಇನ್ನು ಸ್ವಲ್ಪ ಕಾಲ ಅಧಿಕಾರದಲ್ಲಿದ್ದು ನೂತನ ಉದ್ಯಮಗಳನ್ನು ಭದ್ರ ಬುನಾದಿಯ ಮೇಲೆ ನಿಲ್ಲಿಸಿ ನಿವೃತ್ತರಾಗಬಹುದೆಂದು ಮಹಾರಾಜರು ಅಪ್ಪಣೆ ಕೊಡಿಸಿದರು. ಈ ವಿಷಯ ಬಹಿರಂಗವಾಗಬಾರದೆಂದು ಇಬ್ಬರೂ ಸಮ್ಮತಿಸಿದರು. ಎಂಟು ತಿಂಗಳ ಕಾಲ ಈ ವಿಷಯ ಬಯಲಿಗೆ ಬರಲಿಲ್ಲ. ಈ ಅವಧಿಯಲ್ಲಿ ಹೊಸ ಯೋಜನೆಗಳು ಸ್ಥಾಪಿತವಾಗಲಿಲ್ಲ. ಸ್ಥಾಪಿತವಾಗಿದ್ದ ಉದ್ಯಮ ಗಳನ್ನು ಸರಿಯಾದ ಬುನಾದಿಯ ಮೇಲೆ ನಿಲ್ಲಿಸಿ ಎಂಟು ತಿಂಗಳ ನಂತರ ತಮ್ಮ ದಿವಾನಗಿರಿಯಿಂದ ವಿಶ್ವೇಶ್ವರಯ್ಯನವರು ನಿವೃತ್ತರಾದರು.

ಮಹಾರಾಜರ ಕೋಪಕ್ಕೆ, ವಿಶ್ವೇಶ್ವರಯ್ಯನವರ ರಾಜೀನಾಮೆಗೆ ಇನ್ನೂ ಹಲವು ಕಾರಣಗಳಿವೆ. ದಿವಾನರು ಪ್ರಜಾಪ್ರತಿನಿಧಿ ಸಭೆಯ ಅಧಿಕಾರ ಹೆಚ್ಚಿಸಿದ್ದರು. ಆದರೆ ಹೀಗೆ ಮಾಡಲು ಮಹಾರಾಜರ ಪೂರ್ವ ಅನುಮತಿ ಪಡೆದಿರಲಿಲ್ಲ, ಪಡೆಯಬೇಕಾಗಿತ್ತು. ಮಹಾರಾಜರನ್ನು ನೇರವಾಗಿ ಸಂದರ್ಶಿಸುವ ಅವಕಾಶ ದಿವಾನರಿಗೆ ಸುಲಭವಾಗಿ ದೊರೆಯುತ್ತಿರಲಿಲ್ಲ. ಮಹಾರಾಜರ ಆಪ್ತ ಕಾರ್ಯದರ್ಶಿಗಳ ಮೂಲಕ

ದಿವಾನರು ವ್ಯವಹರಿಸಬೇಕಾಗಿತ್ತು. ವಿಶ್ವೇಶ್ವರಯ್ಯನವರು ಮಾತುಗಾರರಲ್ಲ. ತಮ್ಮ ಎಲ್ಲಾ ವಿಚಾರಗಳನ್ನು ಮಹಾರಾಜರಿಗೆ ಪತ್ರಮುಖೇನ ಬರೆದು ತಿಳಿಸುತ್ತಿದ್ದರು. ಇವರು ಎತ್ತುತ್ತಿದ್ದ ಅನೇಕ ಆಕ್ಷೇಪಣೆಗಳು ಮಹಾರಾಜರಿಗೆ ಅಸ್ಪಷ್ಟ, ನಿರಾಧಾರ ಎನಿಸುತ್ತಿದ್ದವು. 1914ರ ಜುಲೈ 2ರಂದು ಹೊಗಳಿ ಪತ್ರ ಬರೆದಿದ್ದ ಮಹಾರಾಜರು ವಿಶ್ವೇಶ್ವರಯ್ಯನವರ ವೇತನವನ್ನು 5,000 ರೂಪಾಯಿಗಳಿಗೆ ಹೆಚ್ಚಿಸಲು ತೀರ್ಮಾನಿಸಿದರು. ತಮ್ಮ ವೇತನ ಹೆಚ್ಚಿಸಬೇಡಿರೆಂದು ವಿಶ್ವೇಶ್ವರಯ್ಯನವರು ಮಹಾರಾಜರನ್ನು ಬೇಡಿಕೊಂಡರು. ಇದನ್ನು ತಿರಸ್ಕರಿಸಿ ಮಾರ್ಚ್ 22, 1918ರಲ್ಲಿ ಅವರ ವೇತನವನ್ನು 5,000 ರೂಪಾಯಿಗಳಿಗೆ ಹೆಚ್ಚಿಸಿದ ರಾಜಾಜ್ಞೆ ಹೊರಬಿತ್ತು.

ಮಹಾರಾಜರಿಗೆ ವಿಶ್ವೇಶ್ವರಯ್ಯನವರು ಮೇಲಿಂದ ಮೇಲೆ ಬರೆಯುತ್ತಿದ್ದ ಪತ್ರಗಳು ಮಹಾರಾಜರ ಮನಶ್ಶಾಂತಿ ಕದಡಿತ್ತು ಎನ್ನುವುದರಲ್ಲಿ ಸಂದೇಹವಿಲ್ಲ. ಸ್ವತಃ ಮಹಾರಾಜರೇ "ನನ್ನ ವಿವರಣೆಗಳು ನಿಮ್ಮನ್ನು ತೃಪ್ತಿಗೊಳಿಸದಿದ್ದರೆ, ಇನ್ನುಳಿದಿರುವುದು ಇನ್ನೊಂದೇ ಮಾರ್ಗ. ನೀವು ರಾಜೀನಾಮೆ ಸಲ್ಲಿಸುವುದು, ನಾನು ಅದನ್ನು ಅಂಗೀಕರಿಸುವುದು" ಎಂದು ತಿಳಿಸಿದರು.

ಕಾರ್ಮೋಡ ಈ ರೀತಿಯಲ್ಲಿ ಕವಿಯುತ್ತಿದ್ದಾಗ ಇಂಡಿಯಾ ಸರ್ಕಾರದಿಂದ ಬಂದ ಪತ್ರ ಕತ್ತಲನ್ನು ಕರಗಿಸಿತು. ಬೀರೂರು – ಶಿವಮೊಗ್ಗ, ಮೈಸೂರು – ನಂಜನಗೂಡು ಮತ್ತು ಬೆಂಗಳೂರು – ಮೈಸೂರು ರೈಲನ್ನು ಮೈಸೂರು ಸರ್ಕಾರಕ್ಕೆ ಬಿಟ್ಟುಕೊಟ್ಟಿರುವುದಾಗಿ ತಿಳಿಸುವ ಪತ್ರ ಇದಾಗಿತ್ತು. ಇದರಿಂದ ಮಹಾರಾಜರಿಗೆ ಸಂತೋಷವಾಯಿತು. ವಿಶ್ವೇಶ್ವರಯ್ಯನವರಿಗೆ ನಿಮ್ಮ ಶ್ರಮದಿಂದ ಇದು ಸಾಧ್ಯವಾಯಿತು ಎಂದು ಪತ್ರ ಬರೆದರು. ಈ ಸನ್ನಿವೇಶವೇ ದಿವಾನರ ಸಂಬಳವನ್ನು 4,000 ರೂಪಾಯಿಗಳಿಂದ 5,000 ರೂಪಾಯಿಗಳಿಗೆ ಏರಿಸಲು ಕಾರಣವಾದುದು.

ಹಲವಾರು ಕಾರಣಗಳಿಂದ ಮನನೊಂದು ವಿಶ್ವೇಶ್ವರಯ್ಯನವರು

ರಾಜೀನಾಮೆ ಸಲ್ಲಿಸಿದ್ದು ನಿಜ. ಆದರೆ ತಾವು ಪ್ರಾರಂಭ ಮಾಡಿದ ಯೋಜನೆಗಳನ್ನು ಪೂರ್ಣ ಮಾಡದೆ ಹೋಗುವುದು ಸರಿಯಲ್ಲವೆಂದು ಅವರಿಗೆ ತೋರುತ್ತಿತ್ತು. ಅದಕ್ಕಾಗಿ ಒಂದು ಸಲಹೆ ಮುಂದಿಟ್ಟರು. ತನ್ನನ್ನು ಮಂತ್ರಿ ಸಂಪುಟದ ಗೌರವ ಸದಸ್ಯನನ್ನಾಗಿ ನೇಮಿಸಿ ಮೋಟಾರಿನಲ್ಲಿ ಸಂಚರಿಸುವುದಕ್ಕೆ ವೆಚ್ಚಕ್ಕಾಗಿ 300 ರೂಪಾಯಿ ಪ್ರಯಾಣ ಭತ್ಯ ಕೊಡಿ. ಜತೆಗೆ ಸಹಾಯಕ್ಕಾಗಿ ಒಬ್ಬ ಇಂಜಿನಿಯರನ್ನು ಕೊಡಿ ಎಂಬುದೇ ಅವರ ಬೇಡಿಕೆ. ತನ್ನ ಸಂಭಾವನೆ ಐದು ಸಾವಿರಕ್ಕೆ ಹೆಚ್ಚಿಸಬೇಡಿ ಎಂದು ಕೇಳಿಕೊಂಡ ವ್ಯಕ್ತಿ ಉಚಿತ ಸೇವೆ ಸಲ್ಲಿಸಲು ಸಿದ್ಧರಾಗಿದ್ದರು. ಮಹಾರಾಜರಿಂದ ಈ ಸಲಹೆಗೆ ಪುರಸ್ಕಾರ ದೊರೆಯಲಿಲ್ಲ.

ವಿಶ್ವೇಶ್ವರಯ್ಯನವರ ರಾಜೀನಾಮೆ 1918ರ ಡಿಸೆಂಬರ್ 9 ರಂದು ಮಹಾರಾಜರಿಂದ ಸ್ವೀಕೃತವಾಯಿತು. ಕಛೇರಿಯ ಎಲ್ಲಾ ಕೆಲಸಗಳನ್ನು ಪೂರ್ಣಗೊಳಿಸಿರುವೆ, ಬಾಕಿ ಏನನ್ನೂ ಉಳಿಸಿಲ್ಲ ಎಂದು ಮಹಾರಾಜರಿಗೆ ತಿಳಿಸಿದರು. ಕಛೇರಿಯಿಂದ ನಿರ್ಗಮಿಸುವ ಮೊದಲು ಇಲಾಖೆಯ ಮುಖ್ಯಾಧಿಕಾರಿಗಳನ್ನು ಬರಮಾಡಿಕೊಂಡರು. ಎಲ್ಲರಿಗೂ ವಂದನೆ ಸಮರ್ಪಿಸಿದರು. ವಂದನೆ, ಕೃತಜ್ಞತೆ ಸಲ್ಲಿಸುತ್ತಲೇ ದಡದಡನೇ ಮೆಟ್ಟಿಲು ಇಳಿದು ಕಾದಿದ್ದ ತಮ್ಮ ಸ್ವಂತ ಮೋಟಾರಿನಲ್ಲಿ ತೆರಳಿದರು.

"ವಿಶ್ವೇಶ್ವರಯ್ಯನವರು ಮೈಸೂರು ಸರ್ಕಾರದಲ್ಲಿ ಅಧಿಕಾರ ಸ್ವೀಕರಿಸಿದ ಮೊದಲಿನಿಂದ ದೇಶದ ಆರ್ಥಿಕೋನ್ನತಿಗಾಗಿ ಏಕ ಮನಸ್ಸಿನಿಂದ ಶ್ರಮಿಸಿದ್ದಾರೆ. ದಿವಾನರಾಗಿ ಅವರ ಆಡಳಿತದ ಫಲವಾಗಿ ಶಿಕ್ಷಣ, ನೀರಾವರಿ, ರೈಲು ಸಂಪರ್ಕ ಮತ್ತು ಕೈಗಾರಿಕೆ ಇವುಗಳಲ್ಲಿ ಪ್ರಮುಖ ಹಾಗೂ ಬಹಳ ವ್ಯಾಪಕವೂ ಆದ ಬೆಳವಣಿಗೆಯಾಗಿ ಭವಿಷ್ಯದಲ್ಲಿ ರಾಜ್ಯದ ಸಮೃದ್ಧ ಪ್ರಗತಿಗೆ ಸುಭದ್ರ ಅಸ್ತಿಭಾರ ಸ್ಥಾಪಿತವಾಗಿದೆ" ಎಂದು ಅವರ ಸೇವೆಯನ್ನು ಹೊಗಳಿ ಮೈಸೂರು ಸರ್ಕಾರ ವಿಶೇಷ ಗೆಜೆಟ್ ಪ್ರಕಟಿಸಿತು.

# 17. ಸ್ವದೇಶಾಭಿಮಾನ

ನಮ್ಮ ನಾಡನ್ನು ನವ ನಾಗರಿಕವಾಗಿ ಮಾಡುವ ಬಯಕೆ ವಿಶ್ವೇಶ್ವರಯ್ಯನವರಿಗೆ. ಇದಕ್ಕಾಗಿ ಅವರು ಮುಂದುವರೆದಿದ್ದ ಪಶ್ಚಿಮದ ದೇಶಗಳಿಗೆ ಆರು ಸಾರಿ ಹೋಗಿ ಬಂದಿದ್ದರು. ವಿಹಾರ ಪರ್ಯಟನೆಗಲ್ಲ. ಉದ್ದೇಶಪೂರಿತ ಪ್ರವಾಸಗಳು. 1898ರಲ್ಲಿ ಜಪಾನಿಗೆ ಹೋದರು. ಅಲ್ಲಿನ ಕೈಗಾರಿಕೋದ್ಯಮಗಳ ಪರಿಶೀಲನೆ ನಡೆಸಿ ವರದಿ ಸಿದ್ಧಪಡಿಸಿದರು. 1908-09ರಲ್ಲಿ ಯೂರೋಪ್, ಇಂಗ್ಲೆಂಡ್ ಮತ್ತು ಅಮೆರಿಕಗಳಿಗೆ ಭೇಟಿ. 1919-20ರಲ್ಲಿ ವಿಶ್ವಪರ್ಯಟನೆ. 1926-27ರಲ್ಲಿ ಕಬ್ಬಿಣ ಮತ್ತು ಉಕ್ಕಿನ ತಯಾರಿಕೆ ಕ್ರಮ ಪರಿಶೀಲಿಸಲು ಸ್ವೀಡನ್, ಯೂರೋಪ್, ಇಂಗ್ಲೆಂಡ್, ಅಮೆರಿಕ ಮತ್ತು ಕೆನಡ ಸಂದರ್ಶನ. 1935ರಲ್ಲಿ ಬೊಂಬಾಯಿಯಲ್ಲಿ ಮೋಟಾರು ತಯಾರಿಕೆ ಕಾರ್ಖಾನೆ ಸ್ಥಾಪಿಸುವ ಉದ್ದೇಶದಿಂದ ಯೂರೋಪ್, ಇಂಗ್ಲೆಂಡ್, ಅಮೆರಿಕ ಮತ್ತು ಕೆನಡ ದೇಶಗಳಲ್ಲಿ ಸಂಚಾರ. 1946-47ರಲ್ಲಿ ಅಖಿಲ ಭಾರತ ಉತ್ಪಾದಕರ ಸಂಘದ ಸದಸ್ಯರೊಡನೆ ಕ್ಷೇತ್ರಗಳನ್ನು ಪರಿಶೀಲಿಸಲು ಪ್ರವಾಸ. ಈ ಪ್ರವಾಸ ಕೈಗೊಂಡಾಗ ಅವರ ವಯಸ್ಸು 86 ವರ್ಷಗಳು.

ಒಂದು ದೇಶದ ನಾಗರಿಕತೆಯನ್ನು ಆ ದೇಶ ಬಳಸುವ ವಿದ್ಯುತ್, ಪೆಟ್ರೋಲ್ ಮತ್ತು ಮೋಟಾರು ವಾಹನಗಳಿಂದ ಅಳೆಯಬಹುದು. ವಿಶ್ವೇಶ್ವರಯ್ಯನವರ ಕಾಲಕ್ಕೆ ಭಾರತ ವಿದೇಶಗಳಿಂದ ಕೋಟ್ಯಂತರ ರೂಪಾಯಿಗಳ ಮೋಟಾರು ವಾಹನ, ವಿದ್ಯುದುಪಕರಣ ಮತ್ತು ಪೆಟ್ರೋಲ್ ಆಮದು ಮಾಡಿಕೊಳ್ಳುತ್ತಿತ್ತು. ಅಪಾರ ಪ್ರಮಾಣದಲ್ಲಿ ವಿದೇಶಗಳಿಗೆ ಹರಿದು ಹೋಗುತ್ತಿದ್ದ ಹಣದಿಂದ ದೇಶ ಬಡವಾಗುತ್ತಿತ್ತು. ಹರಿದು ಹೋಗುತ್ತಿದ್ದ ಹಣ ದೇಶದಲ್ಲಿಯೇ ಉಳಿಯುವಂತೆ ಮಾಡಬೇಕು. ಮೋಟಾರ್ ತಯಾರಿಸುವ ಕಾರ್ಖಾನೆ ನಮ್ಮ ದೇಶದಲ್ಲಿ ಆಗಬೇಕು. ಈ ಉದ್ದೇಶದಿಂದ ತಮ್ಮ ಸ್ವಂತ ಖರ್ಚಿನಲ್ಲಿ ಯೂರೋಪ್ ಮತ್ತು ಅಮೆರಿಕಾ ದೇಶಗಳಿಗೆ ಹೋದರು. ಅಲ್ಲಿ ಬೇರೆ ಬೇರೆ ಮೋಟಾರು

ವಾಹನಗಳ ಕಾರ್ಖಾನೆಗೆ ಭೇಟಿಕೊಟ್ಟು ವಿಚಾರ ವಿನಿಮಯ ನಡೆಸಿದರು. ಬರ್ಮಿಂಗ್‌ಹ್ಯಾಮ್‌ನಲ್ಲಿ ಆಸ್ಟಿನ್ ಮೋಟಾರು ಕಂಪೆನಿಯ ಲಾರ್ಡ್ ಆಸ್ಟಿನ್ ಬಡ ಭಾರತಕ್ಕೆ ಸಣ್ಣ ಮೋಟಾರ್ ಉತ್ತಮವೆಂದು ತಿಳಿಸಿದರು.

ಇಂಗ್ಲೆಂಡಿನಿಂದ ಇಟಲಿ, ಜರ್ಮನಿ, ಫ್ರಾನ್ಸ್ ದೇಶಗಳಿಗೆ ಹೋದರು. ಟ್ಯೂರಿನ್‌ನಲ್ಲಿ ಫಿಯಟ್ ಕಂಪೆನಿಗೆ ಹಲವು ಸಾರಿ ಹೋಗಿ ಅಲ್ಲಿನ ಕಾರ್ಯವಿಧಾನವನ್ನು ವಿವರವಾಗಿ ಪರಿಶೀಲಿಸಿದರು.

ಲಂಡನ್ನಿನ 'ಪೀಪಲ್' ಪತ್ರಿಕೆಯ ವರದಿಗಾರ ವಿಶ್ವೇಶ್ವರಯ್ಯನವರನ್ನು ಸಂದರ್ಶಿಸಿದ. ಪತ್ರಿಕೆ ಸಂದರ್ಶನದ ವರದಿ ಪ್ರಕಟಿಸಿತು. "ಭಾರತದಲ್ಲಿ ಅಣೆಕಟ್ಟು ಕಟ್ಟುವುದರಲ್ಲಿ ತುಂಬಾ ಖ್ಯಾತರಾಗಿರುವ ವಿಶ್ವೇಶ್ವರಯ್ಯನವರು ತಮ್ಮ ದೇಶದಲ್ಲಿ ದೊಡ್ಡ ಮೋಟಾರು ಕಾರ್ಖಾನೆ ಸ್ಥಾಪಿಸುವ ಉದ್ದೇಶದಿಂದ ಇಲ್ಲಿಗೆ ದಯಮಾಡಿಸಿದ್ದಾರೆ. ಈ ಇಂಜಿನಿಯರಿಂಗ್ ಚಾಣಾಕ್ಷ ಅಲ್ಪ ಕಾಲದಲ್ಲೇ ಭಾರತದ ಹೆನ್ರಿ ಫೋರ್ಡ್ ಆಗಬಹುದು. ಮೈದಾಸನಂತೆ ಮುಟ್ಟಿದ್ದೆಲ್ಲಾ ಬಂಗಾರ ಮಾಡುವ ಸಾಮರ್ಥ್ಯ ಅವರಲ್ಲುಂಟು. ಸಿದ್ಧ ಸಾಧನೆ ಅವರ ಹಸ್ತಗುಣ." ಇದು ಸಂದರ್ಶನ ಸಾರ.

ಮುಂದೆ ಅಮೆರಿಕಕ್ಕೆ ಹೋದರು. ಫೋರ್ಡ್ ಕಂಪೆನಿಯ ಜನರಲ್ ಮ್ಯಾನೇಜರ್ ಮತ್ತು ಇತರರನ್ನು ಕಂಡು ವಿಚಾರ ವಿನಿಮಯ ನಡೆಸಿದರು. ಅಲ್ಲಿ ಒಂದು ತಿಂಗಳು ಉಳಿದಿದ್ದು ದಿನಾ ಫೋರ್ಡ್ ಕಂಪೆನಿಗೆ ಹೋಗಿ ಪರಿಶೀಲಿಸುತ್ತಿದ್ದರು. ಭಾರತಕ್ಕೆ ವಾಪಸ್ ಬಂದ ಮೇಲೆ 1936ರಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸುವ ವಿಷಯದಲ್ಲಿ ಸಣ್ಣ ಪುಸ್ತಕ ಪ್ರಕಟಿಸಿದರು. ಪ್ರಪಂಚದಲ್ಲಿ ಬಳಕೆಯಲ್ಲಿದ್ದ ಮೋಟಾರು ವಾಹನಗಳ ಸಂಖ್ಯೆ, ಆ ದೇಶಗಳು ತಯಾರಿಸುತ್ತಿದ್ದ ಅವುಗಳ ಸಂಖ್ಯೆ, ಭಾರತ ಮತ್ತು ಬರ್ಮ ದೇಶಗಳು ಆಮದು ಮಾಡಿಕೊಳ್ಳುತ್ತಿದ್ದ ವಾಹನಗಳು, ಅವುಗಳ ಬೆಲೆ ಮೊದಲಾದ ವಿವರಗಳನ್ನು ಪುಸ್ತಕ ಒಳಗೊಂಡಿತ್ತು. ಇಂಗ್ಲೆಂಡ್ ಅಥವಾ ಅಮೆರಿಕಾದ ಸಹಕಾರದಿಂದ ಭಾರತದಲ್ಲಿ ವರ್ಷಕ್ಕೆ 10,000 ಮೋಟಾರು, 5,000 ಟ್ರಕ್ ತಯಾರಿಸುವ ಯೋಜನೆ ಸಿದ್ಧಪಡಿಸಿದರು.ಮೋಟಾರಿನ ಅಂದಾಜು ವೆಚ್ಚ ಪ್ರಾರಂಭದಲ್ಲಿ 1420

ರೂಪಾಯಿಗಳು. ಕ್ರಮೇಣ ಇದನ್ನು 1,200 ರೂಪಾಯಿಗಳಿಗೆ ಇಳಿಸಬಹುದು. ಯಂತ್ರ, ಕಟ್ಟಡ ಇವುಗಳಿಗೆ 90ಲಕ್ಷ, ಚಾಲ್ತಿ ವೆಚ್ಚಕ್ಕೆ 60 ಲಕ್ಷ. ಒಟ್ಟು 150 ಲಕ್ಷದ ಅಂದಾಜು. ಆಗ ಅಮೆರಿಕಾದಿಂದ ಆಮದು ಮಾಡಿಕೊಳ್ಳುತ್ತಿದ್ದ ಮೋಟಾರಿನ ಬೆಲೆ 3,200ರೂಪಾಯಿ ಇತ್ತು.

ಕೈಗಾರಿಕೋದ್ಯಮಗಳಲ್ಲಿ ಭಾರತ ಮುಂದುವರೆಯುವುದು ಬ್ರಿಟಿಷ್ ಪ್ರಭುತ್ವಕ್ಕೆ ಬೇಡವಾಗಿತ್ತು. ತನ್ನ ಮಾರುಕಟ್ಟೆ ಹೋದೀತು ಎಂಬ ಭಯ. ವಿಶ್ವೇಶ್ವರಯ್ಯನವರು ಬಹಳ ತಾಳ್ಮೆಯಿಂದ ಆರು ವರ್ಷ ಕಾಲ ಮೋಟಾರು ಕಾರ್ಖಾನೆ ಸ್ಥಾಪಿಸಲು ಬೇಕಾದ ಅನುಮತಿಗಾಗಿ ಇಂಡಿಯಾ ಸರ್ಕಾರದೊಡನೆ ಪತ್ರ ವ್ಯವಹಾರ ನಡೆಸಿದರು. ಯಾವ ಸ್ವಾರ್ಥಕ್ಕಾಗಿಯೂ ಅಲ್ಲ, ದೇಶದ ಅಭಿವೃದ್ಧಿಗಾಗಿ. ಕಾಂಗ್ರೆಸ್ ಅಧಿಕಾರ ಸೂತ್ರವನ್ನು ಕೇಂದ್ರ ಮತ್ತು ಹಲವು ಪ್ರಾಂತಗಳಲ್ಲಿ ವಹಿಸಿಕೊಂಡಾಗ ಅವರ ಉತ್ಸಾಹ ಹೆಚ್ಚಿತು. ದೇಶಕ್ಕೆ ಇನ್ನೂ ಪೂರ್ಣ ಸ್ವಾತಂತ್ರ್ಯ ಬಂದಿರಲಿಲ್ಲ. ಆದರೂ ಬೊಂಬಾಯಿ ಪ್ರಾಂತ ಸರ್ಕಾರ ಅಗತ್ಯ ಸೌಲಭ್ಯಗಳನ್ನು ನೀಡುವ ಭರವಸೆ ಕೊಟ್ಟಿತು. ಇದರಿಂದ ಉತ್ಸಾಹ ಪಡೆದ ವಾಲ್‌ಚಂದ್ ಹೀರಾಚಂದ್ ಮತ್ತು ಕೈಗಾರಿಕಾ ಇಲಾಖೆಯ ಡೈರೆಕ್ಟರ್ ಪಿ. ಬಿ. ಅದ್ವಾನಿ ಇಬ್ಬರೂ ಜೊತೆಗೂಡಿ ಡೆಟ್ರಾಯಿಟ್‌ಗೆ ಹೋದರು. ಫೋರ್ಡ್ ಕಂಪೆನಿಯವರು ಷೇರು ಬಂಡವಾಳದಲ್ಲಿ ಶೇಕಡ 51 ಭಾಗ ತನಗೆ ಕೊಡುವುದಾದರೆ ಮಾತ್ರ ಭಾರತದಲ್ಲಿ ಕಾರ್ಖಾನೆ ಸ್ಥಾಪಿಸಲು ನೆರವು ನೀಡುವುದಾಗಿ ತಿಳಿಸಿದರು. ಈ ಷರತ್ತು ಭಾರತದ ದೃಷ್ಟಿಯಿಂದ ಯೋಗ್ಯವೆನಿಸಲಿಲ್ಲ. ಒಪ್ಪಂದ ಕುದುರಲಿಲ್ಲ. ಕಡೆಗೆ ಡೆಟ್ರಾಯಿಟ್‌ನ ಕ್ರೈಸಲಿಕ್ ಕಂಪೆನಿ ತಾಂತ್ರಿಕ ಸಲಹೆ ನೀಡಲು ಒಪ್ಪಿತು.

ಬೊಂಬಾಯಿಯ ಕಾಂಗ್ರೆಸ್ ಸರ್ಕಾರ ಯೋಜನೆಗೆ ಸಹಾಯಕವಾಗಿದ್ದರೂ ಕೇಂದ್ರ ಸರಕಾರ ಸಹಕಾರ ನೀಡಲಿಲ್ಲ. ಮೋಟಾರು ವಾಹನ ಮತ್ತು ಅದರ ಬಿಡಿ ಭಾಗಗಳ ಮೇಲೆ ಕೇಂದ್ರ ಸರ್ಕಾರ ಸುಂಕ ವಿಧಿಸುತ್ತಿತ್ತು. ಇದೇ ಸುಂಕವನ್ನು ರಕ್ಷಣಾ ತೆರಿಗೆಯಾಗಿ ಪರಿವರ್ತಿಸುವಂತೆಯೂ, ಬಿಡಿ ಭಾಗಗಳ ಮೇಲೆ ತೆರಿಗೆ ವಿಧಿಸಬಾರದೆಂದೂ ವಿಶ್ವೇಶ್ವರಯ್ಯನವರು ಕೇಳಿಕೊಂಡರು. ಆದರೆ ಭಾರತ ಸರ್ಕಾರ ಅದಕ್ಕೆ ಒಪ್ಪಿಗೆ ಕೊಡಲಿಲ್ಲ.

ಇದರಿಂದಾಗಿ ವ್ಯವಸ್ಥಾಪಕರು ಮೈಸೂರು ಸಂಸ್ಥಾನದಲ್ಲಿ ಕಾರ್ಖಾನೆ ಸ್ಥಾಪಿಸಲು ಪತ್ರ ವ್ಯವಹಾರ ನಡೆಸಿದರು. ದಿವಾನ್ ಮಿರ್ಜಾ ಇಸ್ಮಾಯಿಲ್ ಎಲ್ಲ ವಿಧವಾದ ಸೌಲಭ್ಯ ನಿಡುವ ಭರವಸೆ ಕೊಟ್ಟರು. ಆದರೆ ಮೈಸೂರು ಸರ್ಕಾರ ಸ್ವತಂತ್ರವಾಗಿ ವ್ಯವಹಾರ ಮಾಡುವ ಸ್ಥಿತಿಯಲ್ಲಿರಲಿಲ್ಲ. ಅದು ಭಾರತ ಸರ್ಕಾರದ ಅಧೀನದಲ್ಲಿತ್ತು. ಕಾರ್ಖಾನೆಯ ಸ್ಥಾಪನೆಗೆ ಅವಕಾಶ ಕೊಡದಂತೆ ಭಾರತ ಸರ್ಕಾರ ತನ್ನ ರೆಸಿಡೆಂಟರಿಗೆ ಆಜ್ಞಾಪಿಸಿತು.

ಏಳು ವರ್ಷಗಳ ತಮ್ಮ ಪ್ರಯತ್ನ ವಿಫಲಗೊಂಡಾಗ ವಿಶ್ವೇಶ್ವರಯ್ಯ ನವರಿಗೆ ಸಹಜವಾಗಿಯೇ ಕೋಪ ಬಂದಿತು. ತಮ್ಮ ಪತ್ರ ವ್ಯವಹಾರ ವನ್ನೆಲ್ಲಾ ಮುದ್ರಿಸಿ ಪ್ರಕಟಿಸಿದರು.

ಅವರು 1908ರಲ್ಲಿ ಕೈಯಿಟ್ಟ ಪ್ರಯತ್ನ ನಲವತ್ತು ವರ್ಷಗಳ ನಂತರ ಫಲಿಸಿತು. ನಲವತ್ತು ವರ್ಷಗಳ ನಂತರ 'ಪ್ರೀಮಿಯರ್ ಆಟೊಮೊಬೈಲ್ ಕಂಪೆನಿ' ಅಸ್ತಿತ್ವಕ್ಕೆ ಬಂತು.

ಮೋಟಾರು ಕಾರ್ಖಾನೆ ಸ್ಥಾಪಿಸಲು ಅನುಮತಿ ಕೊಡದೆ ಹೋದ ಬ್ರಿಟಿಷ್ ಪ್ರಭುತ್ವ ವಿಮಾನ ಕಾರ್ಖಾನೆ ಸ್ಥಾಪಿಸಲು ಪ್ರೋತ್ಸಾಹ ನೀಡಿತು. ಅದಕ್ಕೆ ಅವರು ಕಷ್ಟದಲ್ಲಿದ್ದುದೇ ಕಾರಣವಾಗಿತ್ತು. ಆಗ ಎರಡನೇ ವಿಶ್ವ ಸಂಗ್ರಾಮ ನಡೆಯುತ್ತಿತ್ತು. ಇಂಗ್ಲೆಂಡ್ ವೈರಿಗಳ ದಾಳಿಯಿಂದ ತತ್ತರಿಸಿತ್ತು.

ಈ ಸಮಯದಲ್ಲಿ ವಾಲ್‌ಚಂದ್ ಹೀರಾಚಂದ್ ಕಂಪೆನಿಯ ತಾಂತ್ರಿಕ ಸಲಹೆಗಾರ ಪಿ. ಬಿ. ಅದ್ವಾನಿ ಅಮೆರಿಕಾದಿಂದ ವಿಮಾನದಲ್ಲಿ ಭಾರತಕ್ಕೆ ಬರುತ್ತಿದ್ದರು. ಅವರ ಪಕ್ಕದಲ್ಲಿ ವಿಮಾನ ತಯಾರಿಕಾ ತಜ್ಞ ಪಾವ್‌ಲೆ ಕುಳಿತಿದ್ದರು. ಚೀಣದಲ್ಲಿ ವಿಮಾನ ಕಾರ್ಖಾನೆ ಸ್ಥಾಪಿಸುವ ಬಗೆಗೆ ಸಲಹೆ ನೀಡಲು ಅವರು ಹೊರಟಿದ್ದರು. ಇಂಥ ಕಾರ್ಖಾನೆಯನ್ನು ಭಾರತದಲ್ಲಿ ಸ್ಥಾಪಿಸಲು ಸೂಕ್ತ ಯೋಜನೆ ಕಳುಹಿಸಿಕೊಡುವಂತೆ ಪಾವ್‌ಲೆ ಅವರನ್ನು ಅದ್ವಾನಿ ಕೋರಿದರು. ಅಂತೆಯೇ ಅವರು ಕಳುಹಿಸಿಕೊಟ್ಟರು. ಅಷ್ಟರಲ್ಲಿ ವಾಲ್‌ಚಂದ್ ಹೀರಾಚಂದ್ ಕಂಪೆನಿಗೆ ವಿಶಾಖಪಟ್ಟಣದಲ್ಲಿ ಹಡಗು ಕಟ್ಟುವ ಕೆಲಸವನ್ನು ಸರ್ಕಾರ ವಹಿಸಿತ್ತು. ಈ ಮಧ್ಯೆ ಯುದ್ಧದಲ್ಲಿ

ಇಂಗ್ಲೆಂಡ್ ಜರ್ಮನಿಯಿಂದ ಅಪಾರ ನಷ್ಟಕ್ಕೆ ಈಡಾಗಿತ್ತು. ಅವರಿಗೆ ಹಡಗಿಗಿಂತ ವಿಮಾನದ ಅವಶ್ಯಕತೆ ಹೆಚ್ಚಾಗಿತ್ತು. ಹಡಗಿನ ಬಂದರಿನ ಕೆಲಸ ನಿಲ್ಲಿಸಿ ಕೂಡಲೇ ವಿಮಾನ ಕಾರ್ಖಾನೆ ಸ್ಥಾಪಿಸುವ ಕೆಲಸ ಕೈಗೊಳ್ಳುವಂತೆ ಇಂಡಿಯಾ ಸರ್ಕಾರ ವಾಲ್‌ಚಂದ್ ಹೀರಾಚಂದ್ ಅವರಿಗೆ ತಿಳಿಸಿತು.

ವಿಮಾನ ಕಾರ್ಖಾನೆಯನ್ನು ಸಮುದ್ರ ತೀರದ ಬೊಂಬಾಯಿಯಲ್ಲಿ ಕಟ್ಟಲು ತೀರ್ಮಾನಿಸಲಾಗಿತ್ತು. ಸಮುದ್ರ ತೀರ ಪ್ರದೇಶ ಈ ಬಗೆಯ ಕಾರ್ಖಾನೆ ಕಟ್ಟಲು ಸೂಕ್ತವಲ್ಲ, ಸುರಕ್ಷಿತವಲ್ಲ. ಅದು ವಿಮಾನ ಮತ್ತು ನೌಕಾ ದಾಳಿಗೆ ಸುಲಭವಾಗಿ ಬಲಿಯಾಗಬಲ್ಲದು ಎಂದು ವಿಶ್ವೇಶ್ವರಯ್ಯನವರೂ, ಆಗಿನ ಮೈಸೂರು ದಿವಾನರಾಗಿದ್ದ ಮಿರ್ಜಾ ಇಸ್ಮಾಯಿಲರೂ ಇಂಡಿಯಾ ಸರ್ಕಾರದ ಮನ ಒಲಿಸುವಲ್ಲಿ ಯಶಸ್ವಿಯಾದರು. ಸಮುದ್ರ ತೀರದಿಂದ ದೂರವಿರುವ, ಉತ್ತಮ ಹವಾಗುಣ ಹೊಂದಿರುವ ಬೆಂಗಳೂರಿಗೆ ಬನ್ನಿ ಎಂದು ಆಹ್ವಾನಿಸಿದರು. ಕಾರ್ಖಾನೆಗೆ ಸಕಲ ಸೌಲಭ್ಯ ನೀಡುವ ಭರವಸೆ ನೀಡಿದರು. ಭೂಮಿ, ನೀರು, ವಿದ್ಯುತ್ ಮತ್ತು ಧನಸಹಾಯ ನೀಡುವ ಮಾತು ಕೊಟ್ಟಿತು, ಮೈಸೂರು ಸರ್ಕಾರ. ಮೈಸೂರು ಸರ್ಕಾರ ಅದರಲ್ಲಿ ಪಾಲುಗಾರಿಕೆ ಪಡೆಯಿತು. ಏಷ್ಯಾದಲ್ಲೇ ಅತಿ ದೊಡ್ಡ ವಿಮಾನ ಕಾರ್ಖಾನೆ ಬೆಂಗಳೂರಿನಲ್ಲಿ ಸ್ಥಾಪಿತವಾದುದರ ಹಿನ್ನೆಲೆ ಇದು.

ವಾಲ್‌ಚಂದ್ ಹೀರಾಚಂದ್ ಅವರಿಗೆ ಭಾರತದಲ್ಲಿ ಮೋಟಾರು ಕಾರ್ಖಾನೆ ಸ್ಥಾಪಿಸಲು ಸಾಧ್ಯವಾಗಲಿಲ್ಲ. ಆದರೆ, ವಿಶ್ವೇಶ್ವರಯ್ಯನವರ ಪ್ರಯತ್ನದಿಂದಾಗಿ ವಿಮಾನ ಕಾರ್ಖಾನೆ ಸ್ಥಾಪಿಸಲು ಅವಕಾಶ ದೊರೆಯಿತು. ಅದಕ್ಕೆ ವಿಶ್ವೇಶ್ವರಯ್ಯನವರಿಗೆ ತುಂಬಾ ಸಂತೋಷ ವಾಯಿತು. ಕಂಪೆನಿಯ ಇಂಜಿನಿಯರ್ ಎಂ. ಎಚ್. ಷಾ ಬೆಂಗಳೂರಿಗೆ ಬಂದರು. ಕಾರ್ಖಾನೆಯ ನಿರ್ಮಾಣ ಕಾರ್ಯ ಪ್ರಾರಂಭವಾಯಿತು. ವಿಶ್ವೇಶ್ವರಯ್ಯನವರ ಉತ್ಸಾಹ ಹೇಳತೀರದು. ಪ್ರತಿದಿನ ಕೆಲಸದ ಪ್ರಗತಿ ನೋಡಲು ಮೋಟಾರಿನಲ್ಲಿ ಅತ್ತ ಹೋಗುವರು. ಸುಂಕದಕಟ್ಟೆ ಬಳಿ ಮೋಟಾರು ನಿಲ್ಲಿಸಿ ಒಂದು ಮೈಲು ಸರಸರನೆ ನಡೆದು ಕ್ರಮಿಸುವರು.

ಇಷ್ಟಕ್ಕೆ ಇವರೇನೂ ಸಂಭಾವನೆ ಪಡೆಯುವ ಮೇಲ್ವಿಚಾರಕರಲ್ಲ. ದೇಶಕ್ಕೆ ಸದವಕಾಶ ದೊರೆಯಿತಲ್ಲ ಎಂಬ ಸಮಾಧಾನ.

ಈ ಬೃಹತ್ ವಿಮಾನ ಕಾರ್ಖಾನೆ ಇಂದು ಹಲವಾರು ಸಣ್ಣ ಉದ್ಯಮಗಳ ಸ್ಥಾಪನೆಗೆ ಅವಕಾಶ ನೀಡಿದೆ. ಸಾವಿರಾರು ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಿಕೊಟ್ಟಿದೆ. ಭಾರತೀಯರ ತಂತ್ರಜ್ಞಾನಕ್ಕೆ ಪ್ರೋತ್ಸಾಹ ನೀಡುತ್ತಿದೆ. ಒಂದು ಕಾರ್ಖಾನೆಯಿಂದ ವಿಶ್ವೇಶ್ವರಯ್ಯನವರು ತೃಪ್ತರಾಗಲಿಲ್ಲ. ಇಂಥ ಹಲವಾರು ಕಾರ್ಖಾನೆಗಳು ಸ್ಥಾಪಿತವಾಗಬೇಕೆಂದು ಆಶಿಸುತ್ತಿದ್ದರು.

## 18. ಮಹೋನ್ನತರು

ಗಾಂಧೀಜಿ ಮತ್ತು ವಿಶ್ವೇಶ್ವರಯ್ಯನವರು ಸಮಕಾಲೀನರು. ಇಬ್ಬರದೂ ಮಹೋನ್ನತ ವ್ಯಕ್ತಿತ್ವ. ಇವರಿಬ್ಬರ ದೃಷ್ಟಿ, ಧೋರಣೆ ಬೇರೆಯಾದರೂ, ಪರಸ್ಪರ ಗೌರವಕ್ಕೆ ಚ್ಯುತಿ ಬರಲಿಲ್ಲ. ಗಾಂಧೀಜಿ 'ಸತ್ಯ ಶೋಧನೆ' ಎಂಬ ಹೆಸರಿನಲ್ಲಿ ತಮ್ಮ ಆತ್ಮಕಥೆ ಬರೆದಿದ್ದಾರೆ. ವಿಶ್ವೇಶ್ವರಯ್ಯನವರು 'ಉದ್ಯೋಗ ಜೀವನದ ನೆನಹುಗಳು' ಎಂಬ ಹೆಸರಿನಲ್ಲಿ ತಾವು ಮಾಡಿದ ಕೆಲಸಗಳ ನಿದರ್ಶನಗಳನ್ನು ನಿರೂಪಿಸಿದ್ದಾರೆ.

ತಮ್ಮ ಧ್ಯೇಯ ಸಾಧನೆಗೆ ಇಬ್ಬರೂ ಅನುಸರಿಸುತ್ತಿದ್ದ ದಾರಿ ಬೇರೆ ಬೇರೆ. ದಾರಿಯಲ್ಲಿ ಮಾತ್ರವಲ್ಲ, ದೃಷ್ಟಿಯಲ್ಲೂ ಭಿನ್ನ. ಅತ್ಯಂತ ದೀನದಲಿತರನ್ನೂ ತನ್ನಲ್ಲಿ ಕಾಣುವ ದೃಷ್ಟಿ ಗಾಂಧಿಯವರದು. ಅವರು ತುಂಡು ವಸ್ತ್ರದ ಫಕೀರ. "ಕಾಂಗ್ರೆಸ್ಸಿನ ಏಕೈಕ ಪ್ರತಿನಿಧಿಯಾಗಿ ದುಂಡು ಮೇಜಿನ ಪರಿಷತ್ತಿಗೆ ನೀವು ಲಂಡನ್ನಿಗೆ ಹೋಗುತ್ತಿರುವಿರಿ. ಆದ ಕಾರಣ ಇದರ ಅಂತಸ್ತಿಗೆ ಅನುಗುಣವಾದ ಉಡುಪು ಧರಿಸುವುದು ಸೂಕ್ತ" ಎಂದು ವಿಶ್ವೇಶ್ವರಯ್ಯನವರು ಗಾಂಧೀಜಿಗೆ ಬರೆದಿದ್ದರು. ಇದಕ್ಕೆ ಪ್ರತಿಯಾಗಿ ವಿಶ್ವೇಶ್ವರಯ್ಯನವರು ಸರಿಯಾಗಿ ಒಗೆದು ಗರಿಗರಿ ಇಸ್ತ್ರಿ ಮಾಡಿದ ಶ್ರೇಷ್ಠ ದರ್ಜೆಯ ಉತ್ತಮ ಉಡುಪು ತೊಡುತ್ತಿದ್ದರು. ಉಟ್ಟ

ಮೇಲೆ ಉಡುಪು ಇಸ್ತ್ರಿಯಾಗುತ್ತದೋ, ಇಸ್ತ್ರಿಯಾದ ಮೇಲೆ ಇವರು ತೊಡುತ್ತಾರೋ ಎಂದು ಮದರಾಸಿನ ಮುಖ್ಯಮಂತ್ರಿ ಸಿ. ರಾಜ ಗೋಪಾಲಾಚಾರಿಯವರು ಹಾಸ್ಯ ಮಾಡುತ್ತಿದ್ದರು.

ಗಾಂಧೀಜಿಯವರು ಕಡೆಯವರೆಗೂ ಮಾನವನಿಗೆ ಉತ್ತಮವಾದ ಸಸ್ಯಾಹಾರ ಕುರಿತು ತನ್ನ ಮೇಲೆ ಪ್ರಯೋಗ ಮಾಡಿಕೊಳ್ಳುತ್ತಿದ್ದರು. ಐದು ವ್ಯಂಜನಗಳಿಗಿಂತ ಅಧಿಕ ಮಿಶ್ರಿತವಾದ ಆಹಾರ ಉಣರು. ಬೀಸುಕಲ್ಲಿನಲ್ಲಿ ಬೀಸಿದ ಹಿಟ್ಟು, ಕುಟ್ಟಿದ ಅಕ್ಕಿ, ಬೆಲ್ಲ ಸೇವಿಸುವರು, ಸಕ್ಕರೆ ಕೂಡದು.

ವಿಶ್ವೇಶ್ವರಯ್ಯನವರೂ ಮಿತ ಆಹಾರಿ. ತೂಕ ಮಾಡಿದಂತೆ ಊಟ. ಒಂದು ಮಿಳ್ಳೆ ಹೆಚ್ಚು ಕಡಿಮೆ ಆಗದು. ನಿರ್ದಿಷ್ಟ ವೇಳೆಗೆ ಊಟ. ಭೋಜನ ಕೂಟಗಳಲ್ಲಿ ಊಟ ಉಪಹಾರ ಸೇವಿಸರು.

ಇಬ್ಬರೂ ಸ್ವದೇಶಿ ಭಕ್ತರು. 'ಸ್ವದೇಶಿ' ಎಂದರೆ ಸ್ವದೇಶದಲ್ಲೇ ತಯಾರಾದ ಮಾಲು. ಆದರೆ ಇಬ್ಬರ ದೃಷ್ಟಿಯಲ್ಲೂ 'ಸ್ವದೇಶೀ'ಯ ವ್ಯಾಖ್ಯಾನ ಮಾತ್ರ ಬೇರೆ ಬೇರೆ. ಸಂಪೂರ್ಣವಾಗಿ ನಮ್ಮ ದೇಶದಲ್ಲೇ ತಯಾರಾದ ವಸ್ತುವನ್ನು ಮಾತ್ರ ಗಾಂಧೀಜಿ ಬಳಸುವರು. ಗ್ರಾಮೀಣ ವಸ್ತುಗಳಿಗೆ ಆದ್ಯ ಸ್ಥಾನ. ನಮ್ಮ ದೇಶದಲ್ಲಿ ತಯಾರಾಗದಿದ್ದ ಅಗತ್ಯವಾದ ಅನೇಕ ವಸ್ತುಗಳನ್ನು ಅವರು ಬಳಸುತ್ತಿರಲಿಲ್ಲ. ಸಾಬೂನು, ಗುಂಡು ಸೂಜಿ, ಫೌಂಟನ್‌ಪೆನ್ ಮೊದಲಾದ ವಸ್ತುಗಳು ನಮ್ಮ ದೇಶದಲ್ಲಿ ತಯಾರಾಗುವವರೆಗೆ ಅವರು ಬಳಸುತ್ತಿರಲಿಲ್ಲ. ವಿದೇಶಿ ಮಾಲು ದೊರೆತರೂ ಬಳಸದೆ, ಆಗುತ್ತಿದ್ದ ತೊಂದರೆ ಅನುಭವಿಸುತ್ತಿದ್ದರು.

ವಿಶ್ವೇಶ್ವರಯ್ಯನವರ ಸ್ವದೇಶಿ ಪ್ರೇಮ ಗಾಂಧೀಜಿಯವರ ರೀತಿ ಯದಲ್ಲ. ಸ್ವದೇಶಿ ಆಗಲಿ, ವಿದೇಶಿ ಆಗಲಿ ಅವರು ಇಷ್ಟಪಡುತ್ತಿದ್ದುದು ಉತ್ತಮ ದರ್ಜೆಯ ಮಾಲು. ಕಳಪೆಯಾದರೂ ಸ್ವದೇಶಿಯನ್ನೇ ಬಳಸಬೇಕೆಂಬ ಉತ್ಕಟತೆ ಅವರಲ್ಲಿರಲಿಲ್ಲ.

ಗೃಹ ಕೈಗಾರಿಕೆ, ಗ್ರಾಮೋದ್ಯೋಗ, ನೂಲುವುದು, ನೇಯುವುದು ಮುಂತಾದ ಉದ್ಯೋಗಗಳಿಂದ ಗ್ರಾಮೀಣ ಬಡತನ ಹೋಗಲಾಡಿಸ ಬಹುದೆಂದು ಗಾಂಧಿಯವರ ನಂಬಿಕೆ. ಕೇವಲ ಗ್ರಾಮೋದ್ಯೋಗದಿಂದ

ಮಾತ್ರ ದೇಶದ ಅಭಿವೃದ್ಧಿ ಸಾಧ್ಯವಾಗದು. ಮೂಲಭೂತ ಕೈಗಾರಿಕೆಗಳಿಗೆ ಆದ್ಯತೆ ಅಗತ್ಯ. ಇದು ವಿಶ್ವೇಶ್ವರಯ್ಯನವರ ನಿಲುವು. ಆದರೆ ಇಬ್ಬರೂ ದೇಶದ ಸ್ವಾವಲಂಬನೆಯನ್ನು ಬಯಸುತ್ತಿದ್ದರು.

ಯಂತ್ರದ ಅತಿ ಬಳಕೆ, ಔದ್ಯೋಗೀಕರಣ ಇವುಗಳ ವಿರೋಧಿ ಗಾಂಧೀಜಿ. ಔದ್ಯೋಗೀಕರಣದಿಂದ ಆಗುವ ಅನಾಹುತಗಳಿಗೆ ಗಾಂಧೀಜಿ ಅಂಜುತ್ತಿದ್ದರು.

ವಿಶ್ವೇಶ್ವರಯ್ಯನವರಿಗೆ ಮೋಟಾರು, ವಿದ್ಯುತ್, ವಿಮಾನ ಇವು ಆಧುನಿಕ ನಾಗರಿಕತೆಯ ಅವಶ್ಯಕತೆಗಳಾಗಿದ್ದವು. ಮೋಟಾರು ವಾಹನ ವಿಶ್ವೇಶ್ವರಯ್ಯನವರ ಆರ್ಥಿಕ ದೃಷ್ಟಿಯ ಸಂಕೇತ ಎನ್ನಬಹುದು. ಇದಕ್ಕೆ ಪ್ರತಿಯಾಗಿ ರಾಟೆ ಮಹಾತ್ಮರ ಆರ್ಥಿಕ ಧೋರಣೆಯ ಸಂಕೇತ. ಇಬ್ಬರೂ ಮಹಾನ್ ದೇಶ ಭಕ್ತರು. ಒಬ್ಬರು ವಿಶ್ವಕ್ಕೆ ನೂತನ ಸತ್ಯ, ಅಹಿಂಸೆಯ ಮಾರ್ಗದರ್ಶನ ನೀಡಿದ ಮಹಾತ್ಮರು. ಇನ್ನೊಬ್ಬರು ಅಣೆಕಟ್ಟು, ಕೈಗಾರಿಕೋದ್ಯಮಗಳಿಂದ ಅನ್ನ, ವಸ್ತ್ರ, ವಸತಿ ನೀಡಿ ಬಹುಜನರ ಬಡತನ ನಿವಾರಿಸಿದ ಭಾರತರತ್ನ.

ಗ್ರಾಮಕೈಗಾರಿಕೆ ಬೆಳೆಸುವ ಉದ್ದೇಶದಿಂದ ಗಾಂಧೀಜಿಯವರು ಅಖಿಲ ಭಾರತ ಗ್ರಾಮೋದ್ಯೋಗ ಸಂಘ ಸ್ಥಾಪಿಸಿದರು. ಎಷ್ಟೇ ಭಿನ್ನಾಭಿಪ್ರಾಯ ವಿದ್ದರೂ ವಿಶ್ವೇಶ್ವರಯ್ಯನವರ ಜ್ಞಾನಾನುಭವ ಪಡೆಯಲು ಅವರನ್ನು ಸಲಹಾ ಸಮಿತಿಯ ಸದಸ್ಯರಾಗುವಂತೆ ಆಹ್ವಾನಿಸಿದರು. ಎಲ್ಲ ಸಭೆಗಳಿಗೂ ಬರಬೇಕಾದ್ದಿಲ್ಲ. ಅವರು ಪರಿಣತಿ ಪಡೆದ ವಿಷಯದಲ್ಲಿ ಸಲಹೆ ಅಪೇಕ್ಷಿಸಿದಾಗ ನೀಡಿದರೆ ಸಾಕೆಂದರು. ಸಂಘದ ಸದಸ್ಯರಾಗಿರಲು ವಿಶ್ವೇಶ್ವರಯ್ಯನವರು ಒಪ್ಪಲಿಲ್ಲ. ಆಗ ಗಾಂಧೀಜಿಯವರು "ನನ್ನ ನಿಶ್ಚಿತ ಅಭಿಪ್ರಾಯ ಏನೇ ಇರಲಿ. ನಿಮ್ಮ ಸಹಕಾರ ದೊರೆಯುವ ಒಳ್ಳೆಯ ಅದೃಷ್ಟ ನನ್ನ ಪಾಲಿಗೆ ಲಭಿಸಲಿ ಅಥವಾ ನಿಮ್ಮ ಪ್ರಾಮಾಣಿಕ ವಿರೋಧ ಎದುರಿಸಬೇಕಾದ ಸನ್ನಿವೇಶ ಪ್ರಾಪ್ತವಾಗಲಿ. ನಿಮ್ಮ ಶ್ರೇಷ್ಠ ಸಾಮರ್ಥ್ಯ, ದೇಶಪ್ರೇಮ – ಇವುಗಳಲ್ಲಿ ನನಗಿರುವ ಅತ್ಯುನ್ನತ ಗೌರವಕ್ಕೆ ಎಂದೂ ಕುಂದುಬಾರದು" ಎಂದು ಬರೆದರು.

ನಿಶ್ಶಸ್ತ್ರವಾಗಿ ಅಹಿಂಸಾತ್ಮಕ ಕ್ರಮದಿಂದ ದೇಶರಕ್ಷಣೆ, ಶಾಂತಿಪಾಲನೆ ಸಾಧ್ಯ ಎಂಬ ಗಾಂಧಿಯವರ ವಾದದಲ್ಲಿ ವಿಶ್ವೇಶ್ವರಯ್ಯನವರಿಗೆ ವಿಶ್ವಾಸ ಇರಲಿಲ್ಲ. ದೀರ್ಘಾವಧಿಯ ನಿರಶನ ಕೈಗೊಂಡು ಗಾಂಧೀಜಿ ತಮ್ಮ ದೇಹಾರೋಗ್ಯ ಕೆಡಿಸಿಕೊಳ್ಳುವುದನ್ನು ಅವರು ಒಪ್ಪುತ್ತಿರಲಿಲ್ಲ.

1937ರಲ್ಲಿ ಮಹಾನದಿಯ ಪ್ರವಾಹದಿಂದ ಒರಿಸ್ಸಾ ತತ್ತರಿಸಿ ಹೋಗಿತ್ತು. ಈ ದುರಂತ ಆಗಾಗ ಸಂಭವಿಸುತ್ತಿತ್ತು. ಪ್ರವಾಹದ ಹಾವಳಿ ತಪ್ಪಿಸಲು ಸೂಕ್ತ ಸಲಹೆ ನೀಡುವಂತೆ ಗಾಂಧೀಜಿ, ವಿಶ್ವೇಶ್ವರಯ್ಯನವರ ಸಹಾಯ ಕೋರಿದರು. ಎಪ್ಪತ್ತಾರು ವಯಸ್ಸು ಮೀರಿದ ವಿಶ್ವೇಶ್ವರಯ್ಯ ನವರು ಮಹಾತ್ಮರ ಮನವಿ ಮನ್ನಿಸಿ ಒರಿಸ್ಸಾಕ್ಕೆ ಹೋದರು. ಮಹಾನದಿಯ ಜಲಾನಯನ ಪ್ರದೇಶದಲ್ಲಿ ಸುತ್ತಾಡಿ ವರದಿಗಳಿಂದ ವಿಷಯ ಸಂಗ್ರಹಿಸಿದರು. ಪ್ರವಾಹದಿಂದ ಪಾರಾಗಲು ಕೈಗೊಳ್ಳಬೇಕಾದ ಸೂಕ್ತ ಯೋಜನೆ ಸಲ್ಲಿಸಿದರು. ಒರಿಸ್ಸಾ ಸರಕಾರ ಸಲ್ಲಿಸಿದ ಸಂಭಾವನೆ ತೆಗೆದುಕೊಳ್ಳಲಿಲ್ಲ. ಗಾಂಧೀಜಿಯವರ ಕೋರಿಕೆಯಂತೆ ತಾವು ಕೆಲಸ ನಿರ್ವಹಿಸಿರುವುದಾಗಿ ತಿಳಿಸಿದರು. ಮಹಾತ್ಮರಲ್ಲಿ ಅವರಿಗೆ ಅಷ್ಟು ಗೌರವ.


ಗಾಂಧೀಜಿಯವರೊಡನೆ ವಿಶ್ವೇಶ್ವರಯ್ಯನವರ ಭೇಟಿ

1947ರಲ್ಲಿ ಗಾಂಧೀಜಿಯವರು ದಿಲ್ಲಿಯ ಬಿರ್ಲಾ ಭವನದಲ್ಲಿ ಬಿಡಾರ ಹೂಡಿದ್ದರು. ಇದೇ ಕಾಲಕ್ಕೆ ವಿಶ್ವೇಶ್ವರಯ್ಯನವರೂ ದಿಲ್ಲಿಗೆ ಹೋಗಿದ್ದರು.

ಮಹಾತ್ಮರನ್ನು ಕಾಣಲು ದಿಲ್ಲಿಯಲ್ಲೇ ಇದ್ದ ವಿಶ್ವೇಶ್ವರಯ್ಯನವರು ಬಿರ್ಲಾ ಭವನಕ್ಕೆ ಬಂದರು. ಅವರನ್ನು ಕಾಣಲು ಮೊದಲೇ ಸಂದರ್ಶನ ಗೊತ್ತು ಮಾಡಿಕೊಂಡಿರಲಿಲ್ಲ. ಬಾಗಿಲ ಬಳಿ ಇದ್ದವರಿಗೆ, ಗಾಂಧಿಯವರಿಗೆ ತಮ್ಮ ನಮಸ್ಕಾರ ತಿಳಿಸುವಂತೆ ಹೇಳಿ ಹೊರಡಲನುವಾದರು. ಅಷ್ಟರಲ್ಲಿ ವಿಶ್ವೇಶ್ವರಯ್ಯನವರು ಬಂದಿರುವ ವಿಷಯ ಗಾಂಧೀಜಿಗೆ ಗೊತ್ತಾಯಿತು. ಒಳಕ್ಕೆ ಬರಮಾಡಿಕೊಳ್ಳಲು ಎದ್ದು ಬಂದು ಸ್ವಾಗತಿಸಿದರು. ಎಲ್ಲರೂ ಮಂಡಿಯೂರಿ ನೆಲದ ಮೇಲೆ ಕೂತಿದ್ದರು. ಗಾಂಧೀಜಿ ವಿಶ್ವೇಶ್ವರಯ್ಯ ನವರಿಗೆ ಕುರ್ಚಿ ತರಿಸಿದರು. ಕೆಳಗೆ ಕೂಡಲು ನಿಮ್ಮಿಂದ ಆಗದು ಎಂದು ಸಮಾಧಾನ ಹೇಳಿದರು. ಪರಸ್ಪರ ಯೋಗಕ್ಷೇಮ ವಿಚಾರಿಸಿಕೊಂಡರು. ಗಾಂಧೀಜಿ ಬಾಗಿಲವರೆಗೆ ಬಂದು ವಿಶ್ವೇಶ್ವರಯ್ಯನವರನ್ನು ಬೀಳ್ಕೊಟ್ಟರು. ಭಿನ್ನತೆ ಏನೇ ಇರಲಿ, ಪರಸ್ಪರರ ಅಭಿಮಾನ ಹೀಗಿತ್ತು. ಇದು ಮಹೋನ್ನತರ ಗುಣಲಕ್ಷಣ.

## 19. ಗಂಗಾ ಸೇತುವೆ

ಭರತ ಭೂಮಿಯ ಜೀವನದಿಗಳಲ್ಲಿ ಗಂಗೆ ಅತ್ಯಂತ ಪುಣ್ಯನದಿ ಎಂಬ ಕೀರ್ತಿ ಗಳಿಸಿದೆ. ಈ ನದಿಯಲ್ಲಿ ಸ್ನಾನ ಮಾಡುವುದರಿಂದ ಪಾಪ ಪರಿಹಾರವಾಗುತ್ತದೆ ಎಂಬ ನಂಬಿಕೆ ಹಿಂದೂಗಳಿಗೆ. ಗಂಗೆ ಸದಾ ನೀರಿನ ಪ್ರವಾಹದಿಂದ ಕೂಡಿರುತ್ತದೆ. ಅದು ಒಂದು ಸಾವಿರ ಮೈಲಿಗಿಂತ ಹೆಚ್ಚು ದೂರ ಹರಿದು ಕಲ್ಕತ್ತೆಯ ಹತ್ತಿರ ಬಂಗಾಲದ ಕೊಲ್ಲಿಯನ್ನು ಸೇರುತ್ತದೆ. ಪ್ರವಾಹ ಕಾಲದಲ್ಲಿ ನದಿಯು ಸಮುದ್ರಕ್ಕೆ ಸೇರುವ ಜಾಗದಲ್ಲಿ 5 ರಿಂದ 20 ಮೈಲಿಗಳ ಅಗಲ ಹರಡಿಕೊಳ್ಳುತ್ತದೆ. ಆಳ, ಅಗಲವಾಗಿ ಹರಿಯುವ ನದಿಗೆ ಸೇತುವೆ ಕಟ್ಟುವುದು ಪ್ರಯಾಸದ ಕೆಲಸ. 1907ರಲ್ಲಿ ಬಿಹಾರ ಪ್ರಾಂತದ ಪಾಟ್ನ ಬಳಿ ಗಂಗಾ ನದಿಗೆ ಸೇತುವೆ ಕಟ್ಟುವ ಅಗತ್ಯ ಪ್ರಬಲವಾಗಿ ಕಂಡುಬಂತು. 1945ರಲ್ಲಿ ಮೊಖಾಮೆ ಎಂಬ ಜಾಗದಲ್ಲಿ ನದಿಗೆ ಸೇತುವೆ

ಕಟ್ಟಬಹುದೆಂಬ ನಿರ್ಧಾರವನ್ನು ರೈಲ್ವೆ ಬೋರ್ಡ್ ತೆಗೆದುಕೊಂಡಿತು. ಸೇತುವೆಯ ಖರ್ಚು ಭರಿಸುವ ವಿಷಯದಲ್ಲಿ ಭಿನ್ನಾಭಿಪ್ರಾಯ ತಲೆದೋರಿ ಕೆಲಸ ಪ್ರಾರಂಭವಾಗಲಿಲ್ಲ.

ಅನಂತರ ಸೇತುವೆ ಕಟ್ಟುವ ಜಾಗದ ಬಗೆಗೂ ಭಿನ್ನಾಭಿಪ್ರಾಯ ಪ್ರಾರಂಭವಾಯಿತು. ಭಾರತ ಸ್ವಾತಂತ್ರ್ಯ ಗಳಿಸಿತ್ತು. ಬಾಬು ರಾಜೇಂದ್ರ ಪ್ರಸಾದರು ರಾಷ್ಟ್ರಪತಿ ಆಗಿದ್ದರು. ಅವರದು ಬಿಹಾರ. ಡಾಕ್ಟರ್ ಸೈಯದ್ ಮಹಮದ್ ಬಿಹಾರದ ರಾಜ್ಯಪಾಲರು. ಅವರು ಪಾಟ್ಣದ ಬಳಿ ಸೇತುವೆ ಆಗಬೇಕೆಂದರು. ಪಶ್ಚಿಮ ಬಂಗಾಳದ ವ್ಯಾಪಾರಿಗಳಿಗೆ ಫರಕ್ಕಾ ಅಥವಾ ರ್‍ಆಜಮಹಲ್ ಸರಿಯಾದ ಸ್ಥಳ ಎನಿಸಿತು. ಅಸ್ಸಾಮಿನ ಟೀ ತೋಟದ ಮಾಲೀಕರಿಗೆ ಸಕ್ರಿಗಲ್ಲಿ – ಮಣಿಹಾರಿ ಸರಿಯಾದ ಜಾಗ ಎನಿಸಿತು.

ವಾದ ವಿವಾದ ಹೆಚ್ಚಾಯಿತು. ಸಮಸ್ಯೆ ತುಂಬಾ ಜಟಿಲವಾಯಿತು. ಇದೊಂದು ತಾಂತ್ರಿಕ ವಿಷಯ; ರಾಜಕೀಯಕ್ಕೆ ತಿರುಗಿತು. ಪ್ರಧಾನಿ ಜವಾಹರಲಾಲ್ ನೆಹರೂಗೆ ತಲೆನೋವು ತರತೊಡಗಿತು. ಸ್ಥಳೀಯ ಮತ್ತು ಪ್ರಾಂತೀಯ ಭಾವನೆಗಳಿಗೆ ಬಗ್ಗದ ವಿಶಾಲ ದೃಷ್ಟಿಯ ವ್ಯಕ್ತಿಯೊಬ್ಬರಿಂದ ಈ ಸಮಸ್ಯೆ ಬಗೆಹರಿಸಲು ಸಾಧ್ಯ ಎಂದು ಕೇಂದ್ರ ಮಂತ್ರಿ ಸಂಪುಟಕ್ಕೆ ಅನ್ನಿಸಿತು. ಇಂಥ ಯೋಗ್ಯತೆ ಉಳ್ಳವರು ವಿಶ್ವೇಶ್ವರಯ್ಯನವರು ಒಬ್ಬರೇ. ಅವರು ಕೊಡುವ ತೀರ್ಪನ್ನು ಕೇಂದ್ರ ಸರ್ಕಾರ ಮರುವಿಚಾರ ಮಾಡದೆ ಒಪ್ಪಿಕೊಳ್ಳಬಹುದು ಎಂದರು ನೆಹರೂ. ಈ ತೀರ್ಮಾನದಂತೆ ವಿಶ್ವೇಶ್ವರಯ್ಯನವರಿಗೆ ಪತ್ರ ಬರೆಯಲಾಯಿತು.

ವಿಶ್ವೇಶ್ವರಯ್ಯನವರಿಗೆ ತೊಂಭತ್ತು ವಯಸ್ಸು. ಪ್ರಧಾನಿ ನೆಹರೂರ ಪ್ರಾರ್ಥನೆಯನ್ನು ಗೌರವಿಸಿ ತಾನು ಆ ಹೊಣೆ ಹೊರಲು ಸಿದ್ಧನೆಂದು ಉತ್ತರಿಸಿದರು. ತಾನೊಬ್ಬನೇ ತೀರ್ಪುಗಾರನಾಗಿ ತೀರ್ಪು ನೀಡುವುದು ವ್ಯಾವಹಾರಿಕ ದೃಷ್ಟಿಯಿಂದ ಸರಿ ಅಲ್ಲ ಎನಿಸಿತು. ಒಂದು ಸಮಿತಿಯನ್ನು ನೇಮಿಸುವಂತೆ ಸರ್ಕಾರವನ್ನು ಕೇಳಿಕೊಂಡರು. ಅದರಂತೆ ಸಮಿತಿಯ ರಚನೆಯಾಯಿತು. ವಿಶ್ವೇಶ್ವರಯ್ಯನವರು ಅದರ ಅಧ್ಯಕ್ಷರು.

ಸಮಿತಿ 1952ರ ಮಾರ್ಚ್ 27ರಂದು ದಿಲ್ಲಿಯಲ್ಲಿ ಸಭೆ ಸೇರಿತು. ರೈಲ್ವೆ ಮಂಡಳಿಯ ಅಧ್ಯಕ್ಷರೊಡನೆ ವಿಚಾರ ವಿನಿಮಯ ಮಾಡಿತು. ವಿಶೇಷ ರೈಲಿನಲ್ಲಿ ಬಿಹಾರಕ್ಕೆ ಹೊರಟಿತು. ಪಾಟ್ನಾದಿಂದ 20 ಮೈಲಿವರೆಗೆ ಗಂಗಾ ನದಿಯ ಓಟವನ್ನು ವಿಶೇಷ ವಿಮಾನದಲ್ಲಿ ಚಾಲಕನ ಪಕ್ಕದಲ್ಲಿಯೇ ಕುಳಿತು ವಿಶ್ವೇಶ್ವರಯ್ಯನವರು ನೋಡಿದರು. ಕಲ್ಕತ್ತದಿಂದ, ಖಟಮಂಡುವರೆಗೆ ರೈಲು, ಹಡಗು, ಮೋಟಾರು ವಾಹನಗಳಲ್ಲಿ ಸಂಚರಿಸಿದರು. ಸೇತುವೆ ಕಟ್ಟಲು ಸೂಕ್ತವೆಂದ ಜಾಗಗಳನ್ನೆಲ್ಲಾ ನೋಡಿದರು. ಅಲ್ಲಿನ ಇಂಜಿನಿಯರುಗಳು, ಅಧಿಕಾರಿಗಳು ಸಂಘ ಸಂಸ್ಥೆಗಳ ಪ್ರತಿನಿಧಿಗಳ ಜತೆ ಚರ್ಚಿಸಿದರು. ಭಾರತ ಸೇನೆಯ ಮಹಾ ದಂಡನಾಯಕರಾಗಿದ್ದ ಜನರಲ್ ತಿಮ್ಮಯ್ಯ ಅವರ ಜತೆ ಸಮಾಲೋಚಿಸಿದರು.

ಹಿಂದಿನ ವರದಿಗಳು, ಅಂಕಿ ಸಂಖ್ಯೆಗಳು, ಭಿನ್ನ ಅಭಿಪ್ರಾಯಗಳನ್ನು ಪರಿಶೀಲಿಸಿದರು. ಅನಂತರ ಒಂದು ಕರಡು ವರದಿ ಸಿದ್ಧಪಡಿಸಿದರು. ಅದನ್ನು ಸಮಿತಿಯ ಕಾರ್ಯದರ್ಶಿಯ ಕೈಗೆ ಕೊಟ್ಟು ಸಲಹೆಗಳನ್ನು ನೀಡಿದರು. ಸಮಿತಿಯ ಸದಸ್ಯರೊಡನೆ ಸಮಾಲೋಚಿಸಿ ವರದಿ ಸಿದ್ಧಪಡಿಸುವಂತೆ ತಿಳಿಸಿದರು. ವೃದ್ಧ ವಿಶ್ವೇಶ್ವರಯ್ಯನವರ ಆರೋಗ್ಯ ಅಷ್ಟೇನೂ ಚೆನ್ನಾಗಿರಲಿಲ್ಲ. ದಿಲ್ಲಿಯ ಹವಾಗುಣ ಒಗ್ಗುತ್ತಿರಲಿಲ್ಲ. ಇವರ ಅನುಕೂಲದ ದೃಷ್ಟಿಯಿಂದ ಬೊಂಬಾಯಿಯಲ್ಲಿ ಸಮಿತಿಯ ಕಛೇರಿ ಏರ್ಪಡಿಸಲಾಯಿತು. ಇವರ ಸೂಚನೆಯಂತೆ ವರದಿ ಸಿದ್ಧವಾಯಿತು. ಮೊಖಾಮೆಯೇ ಸೇತುವೆ ಕಟ್ಟಲು ಸರಿಯಾದ ಜಾಗ ಎಂದು ವರದಿಯಲ್ಲಿ ತೀರ್ಮಾನಿಸಿದ್ದರು. ಕೇಂದ್ರ ಮಂತ್ರಿಮಂಡಲ ವರದಿಯನ್ನು ಸಂಪೂರ್ಣವಾಗಿ ಒಪ್ಪಿತು.

ಸೇತುವೆ ನಿರ್ಮಾಣ 1953ರ ಸೆಪ್ಟೆಂಬರ್ ತಿಂಗಳಿನಲ್ಲಿ ಪ್ರಾರಂಭವಾಗಿ 1959ರ ಮೇ ತಿಂಗಳಲ್ಲಿ ಮುಗಿಯಿತು. ಅದಕ್ಕೆ ತಗುಲಿದ ವೆಚ್ಚ 13,96,89,000 ರೂಪಾಯಿಗಳು.

# 20. ವಿಶ್ವಮಾನ್ಯ

ವಿಶ್ವೇಶ್ವರಯ್ಯನವರ ಯಾವುದೇ ಪಕ್ಷಪಾತವಿಲ್ಲದೇ ತೀರ್ಪು ನೀಡಬಲ್ಲ ಗುಣ ಅವರನ್ನು ಹಲವಾರು ಸಮಿತಿಗಳ ಅಧ್ಯಕ್ಷರು ಅಥವಾ ಸದಸ್ಯರಾಗಿ ಕೆಲಸ ಮಾಡುವಂತೆ ಮಾಡಿತು. ಗಂಗಾ ನದಿಯಂತೆಯೇ ತುಂಗಭದ್ರೆ, ಮಹಾನದಿ, ಸಿಂಧೂ ನದಿಗಳೂ ಒಂದಲ್ಲ ಒಂದು ರೀತಿ ಇವರ ಸೇವೆ ಪಡೆದಿವೆ. ಕೆಲವು ಪೌರಸಭೆಗಳೂ, ವಿಚಾರಣಾ ಸಮಿತಿಗಳೂ ಇವರ ಉಪಯೋಗ ಪಡೆದುಕೊಂಡಿವೆ.

ಮಹಾನದಿ ಒರಿಸ್ಸಾದಲ್ಲಿ ಹರಿಯುವ ನದಿ. ತಾನು ಹರಿಯುವ ಪ್ರದೇಶದ ಜನರಿಗೆ ಮಹದುಪಕಾರ ಮಾಡಿದೆ. ಆದರೆ ಪ್ರವಾಹ ಬಂದಾಗ ಅದು ತುಂಬಾ ವಿನಾಶಕಾರಿ. 1937ರಲ್ಲಿ ಬಂದ ಪ್ರವಾಹದಿಂದ ಜನ ಅತಿ ಕಷ್ಟನಷ್ಟಗಳಿಗೆ ಒಳಗಾಗಬೇಕಾಯಿತು. ಆಗ ಅಲ್ಲಿನ ಮುಖ್ಯಮಂತ್ರಿಯಾಗಿ ವಿಶ್ವನಾಥದಾಸರಿದ್ದರು. ಮಹಾತ್ಮ ಗಾಂಧಿಯವರು ಪ್ರವಾಹದ ಹಾವಳಿಯ ಪ್ರದೇಶಕ್ಕೆ ಭೇಟಿ ನೀಡಿದರು. ಆಗಾಗ ಸಂಭವಿಸುವ ಪ್ರವಾಹದಿಂದ ಆಗುವ ಹಾನಿ ತಪ್ಪಿಸಲು ಶಾಶ್ವತ ಪರಿಹಾರ ಅಗತ್ಯ ಎಂದು ತಿಳಿದರು. ಸೂಕ್ತ ಸಲಹೆ ನೀಡಲು ವಿಶ್ವೇಶ್ವರಯ್ಯನವರನ್ನು ಬರಮಾಡಿಕೊಳ್ಳುವಂತೆ ವಿಶ್ವನಾಥದಾಸರಿಗೆ ತಿಳಿಸಿದರು. ಹಾಗೆಯೇ ವಿಶ್ವೇಶ್ವರಯ್ಯನವರಿಗೆ ಒರಿಸ್ಸಾ ಮುಖ್ಯಮಂತ್ರಿಯವರಿಂದ ಬರುವ ಆಮಂತ್ರಣ ಒಪ್ಪಿಕೊಳ್ಳಬೇಕೆಂದೂ ತಿಳಿಸಿದರು.

ವಿಶ್ವೇಶ್ವರಯ್ಯನವರು ಒರಿಸ್ಸಾಕ್ಕೆ ಹೋದರು. 1927-28ರಲ್ಲಿ ಮೂವರು ತಜ್ಞ ಇಂಜಿನಿಯರುಗಳ ಸಮಿತಿ ಮಹಾನದಿಗೆ ಅಣೆಕಟ್ಟು ಕಟ್ಟುವುದು ಅಸಾಧ್ಯ ಎಂದು ವರದಿ ಸಲ್ಲಿಸಿತ್ತು. ಈ ವರದಿಯ ಮೇಲೆ ವಿಶ್ವೇಶ್ವರಯ್ಯನವರು ತಮ್ಮ ವರದಿ ಸಲ್ಲಿಸಬೇಕಿತ್ತು. ಈ ವರದಿಯಲ್ಲಿ ಅವರು ನಿರೀಕ್ಷಿಸಿದ್ದ ವಿವರಗಳು ಇರಲಿಲ್ಲ. ಆದ ಕಾರಣ ಒಂದು ತಾತ್ಕಾಲಿಕ ವರದಿಯನ್ನು 1937ರಲ್ಲಿ ಸಲ್ಲಿಸಿದರು. ಹೆಚ್ಚಿನ ವಿಷಯ ಸಂಗ್ರಹಿಸಲು ಮೂವರು ಇಂಜಿನಿಯರುಗಳ ಸಮಿತಿ ನೇಮಿಸುವಂತೆ ತಿಳಿಸಿದರು.

ಮಾರನೆ ವರ್ಷವೇ ಮತ್ತೆ ವಿಶ್ವೇಶ್ವರಯ್ಯನವರಿಗೆ ಒರಿಸ್ಸಾದಿಂದ ಕರೆ ಬಂತು. ಮತ್ತೆ ಒರಿಸ್ಸಾಗೆ ಹೋಗಿ ಹತ್ತು ದಿನ ಉಳಿದರು. ನದಿಯ ಮುಖಜ ಭೂಮಿಯಲ್ಲಿ ಸಂಚರಿಸಿ ವಿಷಯ ಸಂಗ್ರಹಿಸಿದರು. ಮಹಾನದಿಗೆ ಮೂರು ಮುಖ್ಯ ಉಪನದಿಗಳಿವೆ. ಇವು ಪ್ರವಾಹ ಸಂಭವಿಸಲು ಕಾರಣೀಭೂತ ವಾಗಿವೆ. ಈ ನದಿಗಳಿಗೆ ಅಣೆಕಟ್ಟು ಕಟ್ಟಿ ಅವುಗಳ ನೀರು ಅಧಿಕ ಪ್ರಮಾಣದಲ್ಲಿ ಮಹಾನದಿಗೆ ಸೇರದಂತೆ ತಡೆಗಟ್ಟಬಹುದು. ಮಹಾನದಿ ಪ್ರತಿವರ್ಷ ಅಪಾರ ಪ್ರಮಾಣದಲ್ಲಿ ನೀರು ಮತ್ತು ಮೆಕ್ಕಲು ಮಣ್ಣನ್ನು ತಂದು ಮುಖಜ ಭೂಮಿಯಲ್ಲಿ ಬಿಡುತ್ತದೆ. ಇದರಿಂದ ನದಿಯ ತಳದ ಮಟ್ಟ ಏರುತ್ತಾ ಬರುತ್ತದೆ. ನೀರು ದಡದ ಮೇಲೇರಿ ಉಕ್ಕಿ ಹರಿಯುತ್ತದೆ. ಇದಕ್ಕೆ ವಿಶ್ವೇಶ್ವರಯ್ಯನವರು ತಮ್ಮದೇ ಆದ ಸಲಹೆ ಕೊಟ್ಟರು. ಮಹಾನದಿಗೆ ಎತ್ತರವಾದ ಅಣೆಕಟ್ಟು ಕಟ್ಟುವುದು, ಪ್ರವಾಹದ ಹೆಚ್ಚುವರಿ ನೀರು ಮೊನಾಗುಣಿ ಕಣಿವೆಯ ಮೂಲಕ ಹರಿದು ಹೋಗಲು ಸಾಮಾನ್ಯ ಕಾಲುವೆ ತೋಡುವುದು. ಪ್ರವಾಹದ ನೀರನ್ನು ಜಲಾಶಯದಲ್ಲಿ ಸಂಗ್ರಹಿಸಿ ಬೇಸಿಗೆಯಲ್ಲಿ ಬಳಸಬಹುದು. ವಿದ್ಯುತ್ ಉತ್ಪಾದಿಸಬಹುದು. ಇದು ಒಪ್ಪಿಗೆಯಾಗದಿದ್ದರೆ ಮೂರು ಉಪನದಿಗಳಿಗೆ ಮೂರು ಮೂರು ಬೇರೆ ಬೇರೆ ಅಣೆಕಟ್ಟು ಕಟ್ಟುವ ಸಲಹೆ ನೀಡಿದರು. ಈಗ ಮಹಾನದಿಗೆ ಅಡ್ಡಲಾಗಿ ದೊಡ್ಡ ಅಣೆಕಟ್ಟನ್ನು ಕಟ್ಟಲಾಗಿದೆ.

ಸಿಂಧೂನದಿ ಹಿಮಾಲಯದಲ್ಲಿ ಹುಟ್ಟಿ ಸಿಂಧ್ ಪ್ರಾಂತ್ಯದ ಮೂಲಕ ಹರಿದು ಅರಬ್ಬೀ ಸಮುದ್ರವನ್ನು ಸೇರುತ್ತದೆ. ಸ್ವಾತಂತ್ರ್ಯ ಬರುವುದಕ್ಕೆ ಮೊದಲು ಸಿಂಧ್, ಬೊಂಬಾಯಿ ಪ್ರಾಂತದ ಒಂದು ಜಿಲ್ಲೆಯಾಗಿತ್ತು. ದೇಶ ಭಾಗವಾದ ಮೇಲೆ ಅದು ಪಾಕಿಸ್ತಾನದ ಭಾಗವಾಯಿತು. ಸಿಂಧೂ ನದಿಗೆ 'ಲಾಯ್ಡ್ ಬ್ಯಾರೇಜ್' ಎಂಬ ಹೆಸರಿನ ಅಣೆಕಟ್ಟೆ ಕಟ್ಟಲಾಗಿದೆ. ಈ ಅಣೆಕಟ್ಟೆ ಅರ್ಧ ಮೈಲಿ ಉದ್ದವಿದ್ದು 66 ಕಮಾನುಗಳಿಂದ ಕೂಡಿದೆ. ಈ ಬಹುದೊಡ್ಡ ಯೋಜನೆ ನಿರ್ಮಾಣವಾಗುವಾಗ ದೊಡ್ಡ ಪ್ರಮಾಣದ ಭ್ರಷ್ಟಾಚಾರ ಆಗಿದೆ ಎಂದು ಜನಾಭಿಪ್ರಾಯ ಉಂಟಾಯಿತು. ಕೆಲಸ ನಡೆಯುತ್ತಿರುವಾಗಲೇ ವಿದೇಶಿ ಇಂಜಿಯರುಗಳಿಂದ ಪರಿಶೀಲನೆ

ನಡೆಸಲು ಸರ್ಕಾರ ತಿಳಿಸಿತು. ಆದರೆ ಜನ ವಿದೇಶಿಯರಿಂದ ವಿಚಾರಣೆ ನಡೆಸುವುದನ್ನು ಒಪ್ಪಲಿಲ್ಲ. ಏಕೆಂದರೆ ಅದರ ನಿರ್ಮಾಣದಲ್ಲಿ ತೊಡಗಿದ್ದ ವರು ವಿದೇಶೀಯರೇ. ಜನಾಭಿಪ್ರಾಯಕ್ಕೆ ಮಣಿದು ಸರ್ಕಾರ ವಿಶ್ವೇಶ್ವ ರಯ್ಯ ಮತ್ತು ಹೈದರಾಬಾದಿನ ಮುಖ್ಯ ಇಂಜಿನಿಯರ್ ನವಾಬ್ ಅಲಿ ನವಾಜ್ ಜಂಗ್ ಅವರನ್ನು ಆರೋಪ ಪರಿಶೀಲಿಸಲು ನೇಮಿಸಿತು. ಇಬ್ಬರೂ ಉರಿ ಬಿಸಲನ್ನೂ ಲಕ್ಷಿಸದೆ ಸಿಂಧ್‌ಗೆ ಹೋದರು. ನಾಲ್ಕು ತಿಂಗಳ ಕಾಲ ಕಟ್ಟೆ ಮತ್ತು ನಾಲೆಯ ಪ್ರದೇಶದಲ್ಲಿ ಸಂಚರಿಸಿದರು. ಅಗತ್ಯ ವಿಷಯ ಸಂಗ್ರಹಿಸಿದರು. ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದರು. ಅವರ ವರದಿಯಂತೆ ಜನ ಭಾವಿಸಿದಷ್ಟು ಪ್ರಮಾಣದಲ್ಲಿ ಭ್ರಷ್ಟಾಚಾರ ನಡೆದಿರಲಿಲ್ಲ. ಕೆಲಸ ತುಂಬಾ ಜಟಿಲ. ಕೆಲವು ವಿಭಾಗಗಳು ಪರಸ್ಪರ ಸಹಕರಿಸುತ್ತಿಲ್ಲ. ಕೆಲಸ ಮಂದಗತಿಯಲ್ಲಿ ಸಾಗಲು ಇದು ಕಾರಣ. ಅಂದಾಜು ಅಧಿಕವಾದರೆ ಮಂಜೂರಾತಿ ನೀಡಲು ಸರ್ಕಾರ ಹಿಂಜರಿಯಬಹುದು ಎಂಬ ಭಯದಿಂದ ಕಡಿಮೆ ಅಂದಾಜು ಮಾಡಲಾಗಿದೆ. ಅಗಾಧವೂ, ಕಷ್ಟವೂ ಆದ ಬೃಹತ್ ಪ್ರಮಾಣದ ಯೋಜನೆ ತೃಪ್ತಿಕರವಾಗಿ ಸಾಗುತ್ತಿದೆ. ಇವು ವರದಿಯಲ್ಲಿ ಅಡಗಿರುವ ಮುಖ್ಯಾಂಶಗಳು. ತಾವು ನಿರೀಕ್ಷಿಸಿದ್ದಕ್ಕಿಂತ ವರದಿ ಉತ್ತಮವಾಗಿದೆ ಎಂದು ಆಗಿನ ಬೊಂಬಾಯಿ ಗವರ್ನರ್ ವರದಿಯನ್ನು ಹೊಗಳಿದ್ದಾರೆ.

ತುಂಗಭದ್ರಾ ಜಲಾಶಯ ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಸಮೀಪದಲ್ಲಿದೆ. ಇದು ರಾಜ್ಯದಲ್ಲೇ ದೊಡ್ಡ ಜಲಾಶಯ. ಕಟ್ಟೆಯ ಉದ್ದ ಎರಡು ಮೈಲಿ. ಸ್ವಾತಂತ್ರ್ಯ ಬರುವ ಮೊದಲು ಈ ಜಿಲ್ಲೆಯು ಮದರಾಸು ಪ್ರಾಂತದ ಭಾಗವಾಗಿತ್ತು. ತುಂಗಭದ್ರಾ ನದಿಯು ಮದರಾಸು ಮತ್ತು ಹೈದರಾಬಾದ್ ರಾಜ್ಯಗಳ ನಡುವೆ ಎಲ್ಲೆ ಕಟ್ಟೆಯಲ್ಲಿ ಹರಿಯುತ್ತಾ ಎರಡೂ ರಾಜ್ಯಗಳ ವಿಭಜನೆಯ ಗಡಿಯಾಗಿತ್ತು. ಮೈಸೂರು ಸಂಸ್ಥಾನದಲ್ಲಿ ಹುಟ್ಟಿ ಮದರಾಸು ಹೈದರಾಬಾದ್ ರಾಜ್ಯಗಳಲ್ಲಿ ಹರಿದು ಕೃಷ್ಣಾ ನದಿಯಲ್ಲಿ ಸೇರುವ ಈ ನದಿಯ ನೀರನ್ನು ಬಳಸಿಕೊಳ್ಳುವ ಹಕ್ಕು ಮೂರು ರಾಜ್ಯಗಳಿಗೂ ಇತ್ತು. ಮೈಸೂರು ಸರ್ಕಾರ ತುಂಗಭದ್ರೆಯ

ಒಂದು ಶಾಖೆಯಾದ ಭದ್ರಾನದಿಗೆ ಲಕ್ಕವಳ್ಳಿ ಬಳಿ ಮತ್ತು ತುಂಗಾನದಿಗೆ ಸಕ್ರೆಬೈಲ್ ಬಳಿ ಅಣೆಕಟ್ಟು ಕಟ್ಟುವುದೆಂದು ತೀರ್ಮಾನಿಸಲಾಯಿತು. ಕಟ್ಟೆ ಕಟ್ಟಲು ಸುರ್ಕಿ ಗಾರೆ ಅಥವಾ ಸಿಮೆಂಟ್ ಇವೆರಡರಲ್ಲಿ ಯಾವುದನ್ನು ಬಳಸಬೇಕು ಎಂಬುದರಲ್ಲಿ ಭಿನ್ನಾಭಿಪ್ರಾಯ ತಲೆದೋರಿತು. ಇದನ್ನು ಪಂಚಾಯತಿಗೆ ಬಿಡಲು ಒಪ್ಪಲಾಯಿತು. ವಿಶ್ವೇಶ್ವರಯ್ಯನವರು ಪಂಚಾಯತಿಯ ಅಧ್ಯಕ್ಷರಾಗಿರಬೇಕೆಂಬ ಸಲಹೆ ಸರ್ವಾನುಮತದಿಂದ ಅಂಗೀಕೃತವಾಯಿತು. ಸುರ್ಕಿ ತಯಾರಿಸಲು ತುಂಬಾ ಶ್ರಮಿಸಬೇಕಾಗುತ್ತದೆ. ಸಾವಿರಾರು ಜನರು ದುಡಿಯಬೇಕಾಗುತ್ತದೆ. ಕೆಲಸ ತಡವಾಗುತ್ತದೆ. ಆದ ಕಾರಣ ಸಿಮೆಂಟ್ ಬಳಸುವುದೇ ಸೂಕ್ತ ಎಂಬುದು ಮದರಾಸು ಸರ್ಕಾರದ ಅಭಿಮತ. ಹೈದರಾಬಾದ್ ಸರ್ಕಾರ ಸುರ್ಕಿಯ ಪರವಾಗಿತ್ತು. ಸುರ್ಕಿಯೂ ಸಿಮೆಂಟ್ ಅಷ್ಟೇ ಉತ್ತಮವಾದುದು. ಇದು ವಿಶ್ವೇಶ್ವರಯ್ಯನವರ ಅಭಿಮತ. ಕಡೆಗೆ ಒಂದು ಪಾಲು ಸುರ್ಕಿ, ನಾಲ್ಕು ಪಾಲು ಸಿಮೆಂಟ್ ಬಳಸುವ ಸಲಹೆಗೆ ಒಪ್ಪಿಗೆ ದೊರೆಯಿತು.



ತುಂಗಭದ್ರಾ ಅಣೆಕಟ್ಟು

ಭಾರತದ ಹೆಬ್ಬಾಗಿಲು ಎಂದು ಪ್ರಸಿದ್ಧವಾದ ಬೊಂಬಾಯಿ ಒಂದು ದ್ವೀಪ. ಏಳು ಸಣ್ಣ ದ್ವೀಪಗಳಿಂದ ಕೂಡಿದ ಅತಿ ಜನಭರಿತ ನಗರ. ಒಂದು ಕಡೆ ಆಳವಾದ ಸಮುದ್ರ. ಮಿಕ್ಕಿದ್ದು ಕೆಸರಿನ ಜೌಗು ಪ್ರದೇಶ. ಕಲ್ಲು ಮಣ್ಣುಗಳಿಂದ ತುಂಬಿ ಕಟ್ಟಡ ನಿರ್ಮಿಸಲು 1911ರಿಂದ ಪ್ರಾರಂಭಿಸ ಲಾಯಿತು. ಹೆಚ್ಚು ಹೆಚ್ಚು ಭೂಮಿಯನ್ನು ಜೌಗು ಪ್ರದೇಶದಿಂದ ಬಿಡಿಸಿಕೊಳ್ಳಲು 1919ರಲ್ಲಿ ಯೋಜನೆ ತಯಾರಿಸಲಾಯಿತು. ಪ್ರಸಿದ್ಧ ಟಾಟಾ ಕಂಪೆನಿ ತಾನು ಕೆಲಸ ಮಾಡುವುದಾಗಿ ಮುಂದೆ ಬಂತು. ಭಾರೀ ವೆಚ್ಚದ ಈ ಯೋಜನೆಯನ್ನು ಭಾರತೀಯ ಕಂಪೆನಿಗೆ ಒಪ್ಪಿಸಲು ಬಯಸದೆ, ಇಂಗ್ಲೆಂಡಿನ ಸರ್ ಜಾರ್ಜ್ ಬುಕಾನನ್ ಎಂಬ ತಜ್ಞನನ್ನು ಬರಮಾಡಿಕೊಳ್ಳಲಾಯಿತು. 1145 ಎಕರೆ ಭೂಮಿಯನ್ನು ಸಮುದ್ರ ದಿಂದ ದಕ್ಕಿಸಿಕೊಳ್ಳುವುದೇ ಈ ಯೋಜನೆ. ಏಳು ವರ್ಷ ಕಳೆದರೂ ಈ ಕೆಲಸ ಮುಗಿಯುವ ಸಾಧ್ಯತೆ ಕಾಣಲಿಲ್ಲ. ಬುಕಾನನ್ ಕೇಳಿದಷ್ಟು ಹಣ ಮಂಜೂರಾಗುತ್ತಿತ್ತು. ಸಮುದ್ರಕ್ಕೆ ಉಪ್ಪು ಚೆಲ್ಲಿದಷ್ಟು ಹಣ ಹರಿದು ಹೋಗುತ್ತಿದೆ ಎಂಬ ಆಕ್ಷೇಪ ಬಲವಾಗತೊಡಗಿತು. ಜನಾಭಿಪ್ರಾಯಕ್ಕೆ ಮಣಿದು ಸರ್ಕಾರ ಮತ್ತೊಂದು ಸಮಿತಿಯನ್ನು ನೇಮಿಸಿತು. ಇದಕ್ಕೆ ವಿಶೇಷ ವಿಚಾರಣಾ ಸಮಿತಿ ಎಂದು ಕರೆಯಲಾಯಿತು. ಈಗಿನ ಮಂದಗತಿಯಲ್ಲಿ ಕೆಲಸ ಮುಗಿಯಲು 11 ಕೋಟಿ ರೂಪಾಯಿಗಳು ಮತ್ತು 20 ವರ್ಷ ಬೇಕಾದೀತು ಎಂದಿತು ಸಮಿತಿ. ಗಾಬರಿಗೊಂಡ ಸರ್ಕಾರ ಮತ್ತೊಂದು ಸಮಿತಿಯನ್ನು ನೇಮಿಸಿತು. ಅಲಹಾಬಾದಿನ ಮುಖ್ಯ ನ್ಯಾಯಾಧೀಶ ಸರ್ ಗ್ರಿಂವುಡ್ ಮಿಯರ್ಸ್ ಸಮಿತಿಯ ಅಧ್ಯಕ್ಷರು. ಇವರ ಸಮಿತಿಯಲ್ಲಿ ವಿಶ್ವೇಶ್ವರಯ್ಯನವರು ಇಂಜಿನಿಯರಿಂಗ್ ತಜ್ಞರಲ್ಲಿ ಒಬ್ಬರೇ ಒಬ್ಬರು. ಈ ಸಮಿತಿ ಬೊಂಬಾಯಿಯಲ್ಲಿ ನೆರೆದು ಸಾಕ್ಷಿಗಳ ವಿಚಾರಣೆ ನಡೆಸಿತು. ಅನಂತರ ಲಂಡನ್ನಿಗೆ ಪ್ರಯಾಣ ಬೆಳೆಸಿತು. ಅಲ್ಲಿ ಅಧ್ಯಕ್ಷರ ಆರೋಗ್ಯ ಕೆಟ್ಟಿತು. ವಿಶ್ವೇಶ್ವರಯ್ಯನವರು ಅಧ್ಯಕ್ಷತೆ ವಹಿಸಿ ಕಾರ್ಯ ನಿರ್ವಹಿಸಿದರು. ಅವರ ಪ್ರಶ್ನೆಗಳು ಬುಕಾನನ್ ಅವರನ್ನು ತತ್ತರಿಸುವಂತೆ ಮಾಡಿದವು. ಬುಕಾನನ್ ಮತ್ತು ಅವರ ಕಂಪೆನಿ ಮಾಡಿದ ಮೋಸವನ್ನು

ಬಯಲಿಗೆ ಎಳೆಯುವುದರಲ್ಲಿ ವಿಶ್ವೇಶ್ವರಯ್ಯನವರ ಪಾತ್ರ ಅಸಾಧರಣ ವಾಗಿತ್ತು. ಕಡೆಯಲ್ಲಿ ಈ ಸಮಿತಿ ವಿಶ್ವೇಶ್ವರಯ್ಯನವರ ಸೂಚನೆಯಂತೆ ಹಲವು ರಚನಾತ್ಮಕ ಸಲಹೆಗಳನ್ನು ನೀಡಿತು. ಅದರಂತೆ ನಡೆದುಕೊಳ್ಳ ಲಾಯಿತು. ಇದರಿಂದ ವೆಚ್ಚ ಕುಗ್ಗಿ ಕೆಲಸ ಬೇಗ ಮುಗಿಯಿತು.

ಸರ್ದಾರ್ ವಲ್ಲಭಭಾಯಿ ಪಟೇಲ್ ಸೋದರ, ವಿಠ್ಠಲಭಾಯಿ ಪಟೇಲ್ ಬೊಂಬಾಯಿ ಕಾರ್ಪೊರೇಷನ್ನಿನ ಅಧ್ಯಕ್ಷರಾಗಿದ್ದರು. ಆದಾಯ – ವ್ಯಯ ಸರಿದೂಗಿಸಬೇಕು, ಬೊಂಬಾಯಿ ಕಾರ್ಪೊರೇಷನ್ನಿನ ಆಡಳಿತದ ದಕ್ಷತೆ ಹೆಚ್ಚಿಸಬೇಕು ಎಂದು ಯೋಚಿಸಿದರು. ಅದಕ್ಕಾಗಿ ವಿಶ್ವೇಶ್ವರಯ್ಯನವರನ್ನು ಏಕೈಕ ಸಲಹೆಗಾರರನ್ನಾಗಿ ನೇಮಿಸಿದರು. ವಿಶ್ವೇಶ್ವರಯ್ಯನವರು ವೆಚ್ಚವನ್ನು 25 ಲಕ್ಷ ರೂಪಾಯಿಗಳಿಗಿಂತ ಕುಗ್ಗಿಸುವ ಸಾಧ್ಯತೆ ತೋರಿಸಿಕೊಟ್ಟರು. ಆಡಳಿತದ ದಕ್ಷತೆ ಹೆಚ್ಚಿಸಲು ಇವರು ಕೊಟ್ಟ ಸಲಹೆಗಳು ಸರ್ವಮಾನ್ಯವಾದವು. ಇದರಿಂದಾಗಿ ಅನೇಕ ಪುರಸಭೆ ಗಳಿಂದ ಇವರಿಗೆ ವಿನಂತಿಗಳು ಬಂದವು. ಎಲ್ಲವನ್ನೂ ಒಪ್ಪಿಕೊಳ್ಳುವುದು ಸಾಧ್ಯವಿರಲಿಲ್ಲ. ಆದರೂ ಕರಾಚಿ ಪುರಸಭೆಯ ಪ್ರಾರ್ಥನೆ ಒಪ್ಪಿಕೊಂಡು ಅವರಿಗೊಂದು ವರದಿ ತಯಾರಿಸಿಕೊಟ್ಟರು.

ಕೇಂದ್ರ ಶಾಸನ ಸಭೆಯ ಕೋರಿಕೆಯಂತೆ ಭಾರತದ ಹಣಕಾಸಿನ ಸ್ಥಿತಿಗತಿ ವಿಚಾರಣಾ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದರು.

ರಾಜಕೀಯದಲ್ಲಿ ವಿಶ್ವೇಶ್ವರಯ್ಯನವರು ಹೆಚ್ಚು ಆಸಕ್ತಿ ವಹಿಸುತ್ತಿರಲಿಲ್ಲ. ಇದರಿಂದ ರಚನಾತ್ಮಕ ಕಾರ್ಯಕ್ಕೆ ಗಮನ ಕೊಡಲು ಸಾಧ್ಯವಾಗುವುದಿಲ್ಲ ಎಂದು ಅವರು ತಿಳಿದಿದ್ದರು. ಆದರೂ ದೇಶದ ಆಗುಹೋಗುಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು.

ಬೆಂಗಳೂರಿನ ಟಾಟಾ ವಿಜ್ಞಾನ ಮಂದಿರ, ಟಾಟಾ ಕಬ್ಬಿಣ ಮತ್ತು ಉಕ್ಕಿನ ಕಂಪೆನಿಯ ಸಮಿತಿಯ ಸದಸ್ಯರಾಗಿದ್ದರು. ಹೀಗೆ ಹಲವಾರು ಸಂಘ ಸಂಸ್ಥೆಗಳ ಮೂಲಕ ಅವರು ನಾಡಿಗೆ ಅಪಾರ ಸೇವೆ ಸಲ್ಲಿಸಿದ್ದಾರೆ.

# 21. ಆದರ್ಶ ವ್ಯಕ್ತಿ

ವಿಶ್ವೇಶ್ವರಯ್ಯನವರಿಗೆ ಜೀವನ ಸೂರ್ಯ ಚಂದ್ರರು ಇರುವವರೆಗೆ ಕೀರ್ತಿ ಗಳಿಸಿಕೊಟ್ಟಿದೆ. ಅವರಿಗೆ ದೊರೆತ ಬಿರುದು ಬಾವಲಿಗಳು, ಪುರಸ್ಕಾರಗಳು ಇದಕ್ಕೆ ಸಾಕ್ಷಿ. ವಿದ್ಯಾರ್ಥಿ ದೆಸೆಯಲ್ಲಿ ಹಲವಾರು ಪದಕಗಳು, ಬ್ರಿಟಿಷ್ ಪ್ರಭುತ್ವದಿಂದ ಸಿ. ಪಿ. ಇ. ಮತ್ತು ಕೆ. ಸಿ. ಐ. ಇ. ಬಿರುದು, ಕಲ್ಕತ್ತ, ಪಾಟ್ನಾ, ಅಲಹಾಬಾದ್, ಜಾಧವಪುರ, ಬೊಂಬಾಯಿ, ವಾರಣಾಸಿ, ಆಂಧ್ರ, ಮೈಸೂರು ವಿಶ್ವವಿದ್ಯಾಲಯಗಳಿಂದ ಗೌರವ ಪದವಿ, ಹಲವಾರು ಸಂಘ ಸಂಸ್ಥೆಗಳಿಂದ ಸನ್ಮಾನ, ಗೌರವ ಪದಾಧಿಕಾರ, ಕಡೆಗೆ ಸ್ವತಂತ್ರ ಭಾರತ ಸಲ್ಲಿಸಬಹುದಾದ ಅತ್ಯುನ್ನತ ಪ್ರಶಸ್ತಿ 'ಭಾರತರತ್ನ'.

ಮತ್ತೊಮ್ಮೆ ಮಾನವನಾಗಿ ಹುಟ್ಟಲು ಬಯಸುವಿರಾ? ಎಂಬ ಪ್ರಶ್ನೆಗೆ ಅವರ ಉತ್ತರ ಇಲ್ಲಿದೆ. "ಬಾಲ್ಯದಲ್ಲಿ ನಾನು ಬಯಸುತ್ತಿದ್ದ ಬಯಕೆಗಳೆಲ್ಲ ಈಗ ಪೂರ್ಣವಾಗಿವೆ. ಬಯಸದೆಯೇ ಈ ಭೂಮಿಯಲ್ಲಿ ಹುಟ್ಟಿದೆ. ಜೀವನ ನನಗೆ ಸುಖಪ್ರದವಾಗಿಯೇ ಇದೆ. ಮತ್ತೆ ಬಾಳ ಬಯಸುವಿರಾ? ಎಂದು ಕೇಳಿದರೆ, ಸಂತೋಷದಿಂದ ಆಗಲಿ ಎಂದು ಹೇಳುತ್ತೇನೆ" ಎಂದಿದ್ದಾರೆ.

ಶತಮಾನಕ್ಕೂ ಹೆಚ್ಚು ಕಾಲ ಸಾರ್ಥಕ ಜೀವನ ನಡೆಸಿದ ವಿಶ್ವೇಶ್ವರಯ್ಯನವರ ಜನ್ಮಶತಮಾನೋತ್ಸವವನ್ನು 1960ರ ಸೆಪ್ಟೆಂಬರ್ 15ರಂದು ದೇಶ ಆಚರಿಸಿತು. ಬೆಂಗಳೂರಿನ ಲಾಲ್‌ಬಾಗಿನಲ್ಲಿ ಅಂದು ವಿಶೇಷ ಸನ್ಮಾನ ಸಮಾರಂಭ ಏರ್ಪಾಡಾಗಿತ್ತು. ಜವಾಹರಲಾಲ್ ನೆಹರೂ ಅವರ ಅಳಿಯ ಫಿರೋಜ್ ಗಾಂಧಿ ಸತ್ತು ಒಂದು ವಾರ ಆಗಿತ್ತು. ಆದರೂ ನೆಹರೂ ವಿಶೇಷ ವಿಮಾನದಲ್ಲಿ ಬೆಂಗಳೂರಿಗೆ ಬಂದರು. ಸ್ವತಃ ವಿಶ್ವೇಶ್ವರಯ್ಯನವರು ಸಮಾರಂಭದಲ್ಲಿ ಉಪಸ್ಥಿತರಿದ್ದರು. ಪ್ರಧಾನಿ ನೆಹರೂ ವಿಶ್ವೇಶ್ವರಯ್ಯನವರ ಆದರ್ಶ ಜೀವನವನ್ನು ಮುಕ್ತ ಕಂಠದಿಂದ ಹೊಗಳಿದರು.

"ಭವ್ಯ ಭಾರತದ ಕನಸು ಕಾಣುತ್ತಿದ್ದ ವಿಶ್ವೇಶ್ವರಯ್ಯನವರು ಕೇವಲ ಕನಸುಗಾರರಾಗಿರಲಿಲ್ಲ. ಚಿಂತಕರೂ, ಕಾರ್ಯತತ್ಪರರೂ ಆಗಿದ್ದರು. ತಮ್ಮ ಅಥವಾ ಕೌಟುಂಬಿಕ ಜೀವನದಲ್ಲಿ ಎಂದೂ ಅವರು ಮಗ್ನರಾಗಿರಲಿಲ್ಲ. ಭೂತ ಕಾಲಕ್ಕಿಂತ ಭವಿಷ್ಯ ಕಾಲಕ್ಕೆ ಹೆಚ್ಚು ಗಮನ ಹರಿಸುತ್ತಿದ್ದರು. ಜನರ ಹಿತಾಸಕ್ತಿಯಲ್ಲಿ, ಭಾರತದ ಭವಿಷ್ಯದಲ್ಲಿ ಅವರ ಚಿಂತನೆ ಕೇಂದ್ರೀಕೃತ ವಾಗುತ್ತಿತ್ತು. ಅವರದು ಆದರ್ಶ ಜೀವನ" ಎಂದು ಗೌರವ ಸಮರ್ಪಿಸಿದರು.

ಅಂದಿನ ಸಭೆಯ ಅಧ್ಯಕ್ಷತೆ ವಹಿಸಿದ್ದ ರಾಜಪ್ರಮುಖ ಜಯಚಾಮ ರಾಜ ಒಡೆಯರ್ ಸಹ ಅವರನ್ನು ಮುಕ್ತ ಕಂಠದಿಂದ ಹೊಗಳಿದರು. ವಿಶ್ವೇಶ್ವರಯ್ಯನವರ ಪ್ರತಿಯೊಂದು ಕೆಲಸವನ್ನೂ ಕೃತಜ್ಞತೆಯಿಂದ ಸ್ಮರಿಸಿಕೊಂಡರು.

ವಿಶ್ವೇಶ್ವರಯ್ಯನವರು ಹುಟ್ಟಿನಿಂದ ಬಡವರು. ಮನೆತನದಿಂದ ಸಭ್ಯರು. ಬೆಳವಣಿಗೆಯಿಂದ ಸಂಯಮಿ. ಸ್ವಭಾವದಿಂದ ಸಜ್ಜನರು. ಅಜಾತಶತ್ರು, ಪರೋಪಕಾರಿ. ವೃತ್ತಿಯಿಂದ ಇಂಜಿನಿಯರ್, ಸಂದರ್ಭದಿಂದ ದಿವಾನ್, ಮನೋಧರ್ಮದಿಂದ ವಿಜ್ಞಾನಿ. "ದುಡಿದರೆ ಉದ್ಧಾರ, ದುಡಿಯದಿದ್ದರೆ ವಿನಾಶ'– ಈ ಸಂದೇಶ ಮುಟ್ಟಿಸುವ ಉದ್ದೇಶದಿಂದ ಸ್ವತಃ ದುಡಿದರು. ದುಡಿಮೆಯ ಹಿರಿಮೆ ತೋರಿಸಿಕೊಟ್ಟರು. ನಾಡಿನ ಏಳಿಗೆಗೆ ದುಡಿಯ ಬೇಕೆಂದು ತಮ್ಮ ಆರೋಗ್ಯ ಕಾಪಾಡಿಕೊಂಡು ಬಂದರು. ದುಡಿದು ದೊಡ್ಡವರಾದರು.

ಅವರು ಆರೋಗ್ಯವಂತರಾಗಿರಲು ಪ್ರತಿದಿನವೂ ಮೂರು ನಾಲ್ಕು ಮೈಲಿ ನಡೆಯುವರು. ನಗರದ ಕಲುಷಿತ ವಾತಾವರಣದಿಂದ ಹತ್ತಾರು ಮೈಲಿ ದೂರ ಮೋಟಾರಿನಲ್ಲಿ ಹೋಗುವರು. ಅಲ್ಲಿ ಮೋಟಾರಿನಿಂದ ಇಳಿದು ಸರಸರ ಹೆಜ್ಜೆ ಹಾಕುವರು.

ಎಲ್ಲದರಲ್ಲೂ ಸುವ್ಯವಸ್ಥೆ. ತಮ್ಮ ಮೇಜಿನ ಮೇಲೆ ಕೆಂಪು, ಹಸಿರು, ನೀಲಿ, ಕಪ್ಪು ಬಣ್ಣದ ಸೀಸದ ಕಡ್ಡಿಗಳನ್ನು ಹೆರೆದು ಇಟ್ಟಿರುವರು. ರಬ್ಬರ್, ಗೋಂದು, ಕತ್ತರಿ, ಚಾಕು, ಗುಂಡುಸೂಜಿ ವ್ಯವಸ್ಥಿತವಾಗಿ ಇರುವುವು.

ರಬ್ಬರ್ ಜೋಡಿಸಿದ ಪೆನ್ಸಿಲ್ ಅವರಿಗೆ ಪ್ರಿಯ. ಇತರರು ಇವನ್ನು ಮುಟ್ಟಕೂಡದು. ಟೈಪು ಆಗಬೇಕಾದ ಪತ್ರದ ಕರಡು ಪ್ರತಿಯನ್ನು ಮೊನಚಾದ ಸೀಸದ ಕಡ್ಡಿಯಿಂದ ಸಣ್ಣ ಅಕ್ಷರಗಳಲ್ಲಿ ಕೊರೆಯುವರು. ಹೊರಕ್ಕೆ ಹೋಗುವಾಗ ಜೇಬಿನಲ್ಲಿ ತುಂಡು ಪೆನ್ಸಿಲ್, ಚೂರು ಕಾಗದ ಲಕೋಟೆಗಳಲ್ಲಿ ಹಾಕಿಕೊಳ್ಳುವರು. ಅಗತ್ಯ ವಿಷಯಗಳನ್ನು ಕೂಡಲೇ ಟಿಪ್ಪಣಿ ಮಾಡಿಕೊಂಡು ಮನೆಗೆ ಬಂದು ನೋಟ್ ಪುಸ್ತಕದಲ್ಲಿ ಬರೆದಿಡುವರು.

ವಿಶ್ವೇಶ್ವರಯ್ಯನವರು ನಿರೋಗಿಯಾಗಿ, ಶತಾಯುಷಿಯಾಗಿ ಜೀವಿಸಿರಲು ಆಹಾರ, ವಿಹಾರ, ನಿದ್ರೆ, ವ್ಯಾಯಾಮ, ಸಂಯಮ ಇವು ಮುಖ್ಯ ಕಾರಣಗಳು. ಮಿತಾಹಾರಿ. ತೂಗಿದಂತೆ ಊಟ. ಒಂದು ಮಿಳ್ಳೆ ಹೆಚ್ಚು ಆಗಬಾರದು; ಕಡಿಮೆಯೂ ಆಗಬಾರದು. ರಾತ್ರಿ 10ಕ್ಕೆ ಮಲಗುವರು. ಬೆಳಗ್ಗೆ 6ಕ್ಕೆ ಏಳುವರು. ಬೆಳಿಗ್ಗೆ ಲಘು ಉಪಾಹಾರ, ಲಘು ಕಾಫಿ; ಊಟಕ್ಕೆ ಎರಡು ಬ್ರೆಡ್ ತುಣುಕು ಅಥವಾ ಎರಡು ಸಣ್ಣ ಚಪಾತಿ, ಕೆಲವು ಚಮಚ ಅನ್ನ, ಸಾರು, ಮೊಸರು, ಒಂದು ಬೆಂದ ಸೇಬಿನ ಹಣ್ಣು, ನಂಜನಗೂಡು ರಸಬಾಳೆ; ಮಧ್ಯಾಹ್ನ ಬಿಸ್ಕತ್ತು, ಕಾಫಿ. ನಡುವೆ ಏನನ್ನೂ ಸೇವಿಸುವವರಲ್ಲ.

ವಿಶ್ವೇಶ್ವರಯ್ಯನವರು ಐವತ್ತು ವರ್ಷಕ್ಕೂ ಹೆಚ್ಚುಕಾಲ ದೊಡ್ಡದೊಡ್ಡ ಅಧಿಕಾರದಲ್ಲಿದ್ದರು. ಸಣ್ಣ ಉದ್ಯೋಗಗಳಿಗೆ ತಮಗೆ ಬೇಕಾದವರನ್ನು ನೇಮಿಸಿಕೊಳ್ಳಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ದಿವಾನ್ ಪದವಿ ಸ್ವೀಕರಿಸುವ ಮುನ್ನ ಭೋಜನಕ್ಕೆ ತಮ್ಮ ಬಂಧು - ಬಳಗ ಕರೆಸಿಕೊಂಡರು. ಊಟ ಆದ ಮೇಲೆ ಅವರಿಗೆ ಯಾರೂ ತನ್ನನ್ನು ಕೆಲಸ ಕೊಡಿಸಿರೆಂದು ಕೇಳಕೂಡದು. ಆ ರೀತಿ ವಚನ ಕೊಟ್ಟರೆ ಮಾತ್ರ ತಾನು ದಿವಾನ್ ಸ್ಥಾನ ಸ್ವೀಕರಿಸುವುದಾಗಿ ತಿಳಿಸಿದರು. ಬಂಧುಗಳಿಗೆ ಪ್ರತಿ ತಿಂಗಳೂ ತಮ್ಮ ಸಂಬಳದಿಂದ ಹಣ ಕಳಿಸುತ್ತಿದ್ದರು. ನಿವೃತ್ತರಾದ ಮೇಲೂ ತನಗೆ ಬೇಕಾದ ಸ್ವಲ್ಪ ಭಾಗ ಹಣ ಇಟ್ಟುಕೊಂಡು ಮಿಕ್ಕ ಹಣವನ್ನು ಬಂಧುಗಳಿಗೆ ಹಂಚಿಬಿಡುತ್ತಿದ್ದರು. ತಮ್ಮ ಉಯಿಲು ಪತ್ರದಲ್ಲಿ ದೀರ್ಘಕಾಲ ತಮ್ಮ ಸೇವಕರಾಗಿದ್ದವರಿಗೆ ಹಣ ಕೊಡುವಂತೆ

ಬರೆದಿಟ್ಟಿದ್ದರು. ಬಂಧುಗಳಿಗೆ ತಮ್ಮ ಮನೆಯಲ್ಲಿ ಇರಲು ಅವಕಾಶ ಕೊಡುತ್ತಿರಲಿಲ್ಲ. ಏಕಾಂಗಿಯಾಗಿಯೇ ಕಾಲ ಕಳೆದರು. ಕಡೆಗಾಲದಲ್ಲಿ ಹಿತೈಷಿಗಳ ಒತ್ತಾಯಕ್ಕೆ ತಮ್ಮ ಸೋದರನ ಮಗ ಬಂದು ತಮ್ಮ ಜತೆ ಉಳಿಯಲು ಅವಕಾಶ ಮಾಡಿಕೊಟ್ಟರು.

ಅವರು ಯಾವಾಗಲೂ ಸಜ್ಜನರ ಸಹವಾಸವನ್ನು ಮಾಡುತ್ತಿದ್ದರು. ಯಾರಿಗೂ ಶಿಫಾರಸು ಪತ್ರ ಕೊಡರು. ಆತ್ಮಸ್ತುತಿ ಅವರಿಗೆ ಅಪ್ರಿಯ. "ಯೋಜಕ ನಾನು. ಸಾಧಕರು ಅಧಿಕಾರಿಗಳು. ಇದರ ಯಶಸ್ಸಿಗೆ ಕೀರ್ತಿಗೆ ಪಾತ್ರರು ಅವರು ಮತ್ತು ಸರ್ಕಾರ. ನನ್ನನ್ನು ಅತಿಯಾಗಿ ಸ್ತುತಿಸಬೇಡಿ" ಎನ್ನುತ್ತಿದ್ದರು. "ಮೈಸೂರಿನ ಜನ ನಾನು ಮಾಡದಿರುವ ಅಕಾರ್ಯಗಳಿಗಾಗಿ ನನ್ನನ್ನು ದೂಷಿಸದಿರಲಿ. ನಾನು ಮಾಡದಿರುವ ಅಪರಾಧಗಳಿಗಾಗಿ ನನ್ನನ್ನು ಅಪರಾಧಿಯಾಗಿ ಮಾಡದಿರಲಿ. ಇಷ್ಟಾದರೆ ಸಾಕು. ನನ್ನ ತೃಪ್ತಿ ಕಂಠಪೂರ್ತಿಯಾದೀತು" ಎಂದು ತಮ್ಮ ಒಂದು ಪತ್ರದಲ್ಲಿ ಬರೆದಿದ್ದಾರೆ.

ವಿಶ್ವೇಶ್ವರಯ್ಯನವರದು ನಿಷ್ಕಳಂಕ, ಪರಿಶುದ್ಧ ಜೀವನ. ಸರ್ಕಾರದ ಕೆಲಸಕ್ಕೆ ಸರ್ಕಾರದ ವಾಹನ. ಸ್ವಂತ ಕೆಲಸಕ್ಕೆ ಸ್ವಂತ ವಾಹನ. ತಮ್ಮ ಮೋಟಾರಿನಲ್ಲಿ ಯಾರಾದರೂ ಬಂದರೆ, ಅವರ ಹೆಸರುಗಳನ್ನು ಮೊದಲೇ ಮಹಾರಾಜರಿಗೆ ಬರೆದು ಕಳಿಸುವರು. ಸರ್ಕಾರಿ ಕೆಲಸದ ಮೇಲೆ ಹೋದಾಗ ಯಾರೇ ನೀಡುವ ಉಚಿತ ಊಟದ ವ್ಯವಸ್ಥೆ ಇವರು ಒಪ್ಪುತ್ತಿರಲಿಲ್ಲ. ಸರ್ಕಾರ ಪ್ರವಾಸವೆಚ್ಚ, ದಿನಭತ್ಯೆ ನೀಡುತ್ತದೆ. ಉಚಿತ ಸೇವೆ ಸ್ವೀಕರಿಸಬಾರದು ಎಂಬುದು ಅವರ ಖಚಿತ ನಿಲುವು.

ಆಗಿನ ಕಾಲಕ್ಕೆ ವಿದ್ಯುತ್ ಸೌಲಭ್ಯ ನಗರಗಳಿಗೆ ಮಾತ್ರ ಲಭ್ಯವಿತ್ತು. ಆದ ಕಾರಣ ತಮ್ಮ ಜೊತೆಯಲ್ಲಿ ಎರಡು ಕಟ್ಟು ಮೇಣದಬತ್ತಿ ಒಯ್ಯುವರು. ಒಂದು ಸರ್ಕಾರದ ವೆಚ್ಚದಲ್ಲಿ ಕೊಂಡ ಮೇಣದಬತ್ತಿ, ಇನ್ನೊಂದು ಸ್ವಂತದ್ದು. ಇದೇ ರೀತಿಯಲ್ಲಿ ಸರ್ಕಾರದ ಮೊಹರಿನ ಕಾಗದ ಮತ್ತು ತನ್ನ ಸ್ವಂತ ಅಂಕಿತ ಕಾಗದ. ಸರ್ಕಾರದ ಕೆಲಸಕ್ಕೆ ಸರ್ಕಾರದ ಮೇಣದ ಬತ್ತಿ, ಸರ್ಕಾರದ ಕಾಗದ. ಸ್ವಂತ ಕೆಲಸಕ್ಕೆ ಸ್ವಂತದ್ದು. ಸಂದೇಹ ಬಂದಾಗ ಕಾಗದವನ್ನು ಬೆಳಕಿಗೆ ಎತ್ತಿ ಹಿಡಿದು ಸರ್ಕಾರದ ಒಳ ಚಿಹ್ನೆ ಇದ್ದಲ್ಲಿ ಸ್ವಂತಕ್ಕೆ

ಅದನ್ನು ಬಳಸುತ್ತಿರಲಿಲ್ಲ. ಇದು ಕಟ್ಟುಕತೆಯಲ್ಲ. ನಿಜವಾಗಿ ನಡೆಯುತ್ತಿದ್ದುದು.

ನಿವೃತ್ತ ದಿವಾನ್ ವಿಶ್ವೇಶ್ವರಯ್ಯನವರು ಬೆಂಗಳೂರಿನ 'ಹೈಗ್ರೌಂಡ್ಸ್'ನಲ್ಲಿನ 'ಅಪ್‌ಲಾಂಡ್ಸ್' ಬಂಗಲೆಯಲ್ಲಿ ಬಾಡಿಗೆಗೆ ಇದ್ದರು. ಬಾಡಿಗೆ ಮನೆ ಬಿಡಬೇಕಾಗಿ ಬಂತು. ಸ್ವಂತ ಮನೆ ಕಟ್ಟಿಕೊಳ್ಳಿ ಎಂದರು ದಿವಾನ್ ಸರ್ ಮಿರ್ಜಾ. "ಇದುವರೆಗೂ ನನ್ನ ಜೀವಮಾನವೆಲ್ಲಾ ಬಾಡಿಗೆ ಮನೆಯಲ್ಲಿ ಕಳೆದದ್ದಾಯಿತು. ಇನ್ನೆಷ್ಟು ಕಾಲ ಬದುಕಿರುವೆ. ನನಗೇಕೆ ಸ್ವಂತ ಮನೆ" ಎಂದರು. ಕೆ. ಸಿ. ರೆಡ್ಡಿಯವರು ಮುಖ್ಯಮಂತ್ರಿಗಳಾಗಿದ್ದಾಗ ಕಬ್ಬನ್ ರಸ್ತೆಯ ಸರ್ಕಾರಿ ಬಂಗಲೆಯೊಂದನ್ನು 250ರೂಪಾಯಿಗಳಿಗೆ ಕೊಡಿಸಿದರು.

ಕಡೆಯ ಕಾಲದಲ್ಲಾದರೂ ಸ್ವಂತ ಮನೆಯಲ್ಲಿ ಉಳಿಯುವುದು ಒಳ್ಳೆಯದೆಂದು ಗೆಳೆಯರು ಒತ್ತಾಯಿಸುತ್ತಿದ್ದರು. ಗೆಳೆಯರ ಒತ್ತಾಯಕ್ಕೆ ಮಣಿದು, ತನಗಾಗಿ ಸಣ್ಣ ಬಂಗಲೆ ಕೊಳ್ಳುವಂತೆ ಮೈಸೂರು ಬ್ಯಾಂಕಿನ ಮ್ಯಾನೇಜರ್ ಬಿ. ವಿ. ನಾರಾಯಣ ರೆಡ್ಡಿಯವರಿಗೆ ತಿಳಿಸಿದರು. ಅವರು ದಂಡಿನ ಮ್ಯೂಸಿಯಂ ರಸ್ತೆಯಲ್ಲಿ ಒಂದು ಮನೆ ಗೊತ್ತುಮಾಡಿ ಅದರ ಬೆಲೆ ತಿಳಿಸಿದರು. ಅವರು ಹೇಳಿದ ಮೊತ್ತಕ್ಕೆ ಮರು ಮಾತಾಡದೆ ಚೆಕ್ ಬರೆದುಕೊಟ್ಟರು. ರೆಡ್ಡಿಯವರ ಶ್ರಮಕ್ಕಾಗಿ ಕಮಿಷನ್ ಲೆಕ್ಕ ಹಾಕಿ ಅವರಿಗೂ ಚೆಕ್ ಬರೆದುಕೊಟ್ಟರು. ಆದರೆ ಅವರು ತೆಗೆದುಕೊಳ್ಳಲು ನಿರಾಕರಿಸಿದರು. ಕಡೆಗೂ ವಿಶ್ವೇಶ್ವರಯ್ಯನವರು ಕೊನೆಯ ಉಸಿರೆಳೆದದ್ದು ಬಾಡಿಗೆ ಮನೆಯಲ್ಲೇ.

ವಿಶ್ವೇಶ್ವರಯ್ಯನವರು ವಿದೇಶಕ್ಕೆ ಹೋಗಬೇಕಾಗಿತ್ತು. ಸಾಕಷ್ಟು ಹಣ ಇರಲಿಲ್ಲ. ಮೈಸೂರು ಬ್ಯಾಂಕಿಗೆ ಫೋನ್ ಮಾಡಿದರು. ಮ್ಯಾನೇಜರ್ ಬಿ. ವಿ. ನಾರಾಯಣ ರೆಡ್ಡಿಯವರಿಗೆ ತಾವೇ ಬ್ಯಾಂಕಿಗೆ ಬರುವುದಾಗಿ ತಿಳಿಸಿದರು. ರೆಡ್ಡಿಯವರು ಪ್ರವೇಶದ್ವಾರದ ಬಳಿ ಕಾದಿದ್ದು ಸ್ವಾಗತಿಸಿದರು. ರುಜು ಮಾಡಲು ಸಾಲದ ಕಾಗದಪತ್ರ ಸಿದ್ಧವಾಗಿತ್ತು. ವಿಶ್ವೇಶ್ವರಯ್ಯನವರು ಜಾಮೀನಿಗಾಗಿ ಇಂಡಿಯಾ ಸರ್ಕಾರದ ಬಾಂಡ್‌ಪತ್ರಗಳನ್ನು

ತೆಗೆದು ಮೇಜಿನ ಮೇಲಿಟ್ಟರು. ತಾವು ಬಾಂಡ್‌ಪತ್ರ ಕೊಡಬೇಕಾದ ಅವಶ್ಯಕತೆ ಇಲ್ಲ, ತಮ್ಮ ಪ್ರಾಮಾಣಿಕತೆಯೇ ಬಾಂಡ್‌ಪತ್ರ ಎಂದರು ರೆಡ್ಡಿಯವರು. ಬಡ್ಡಿ ಶೇಕಡಾ ಮೂರೂವರೆ. ಇದೇನು ಇಷ್ಟು ಕಡಿಮೆ ದರ? ನನಗೆ ವಿಶೇಷ ರಿಯಾಯಿತಿ ಬೇಡ ಎಲ್ಲರಿಗೂ ವಿಧಿಸುವ ಬಡ್ಡಿ ನನಗೂ ವಿಧಿಸಿ ಎಂದರು. ತಮ್ಮ ಸೇವೆಯ ಅವಧಿಯಲ್ಲಿ ಹೆಚ್ಚು ಬಡ್ಡಿ ವಿಧಿಸುವಂತೆ ಕೇಳಿಕೊಂಡ ಬೇರೆ ವ್ಯಕ್ತಿಯನ್ನು ಕಂಡಿಲ್ಲ ಎಂದಿರುತ್ತಾರೆ ರೆಡ್ಡಿಯವರು.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಕನ್ನಡದ ಪ್ರಸಿದ್ಧ ಲೇಖಕರು. ಅವರು 1977-78ರಲ್ಲಿ ಅಮೆರಿಕಾಕ್ಕೆ ಹೋಗಿದ್ದರು. ಆಗ ಅವರು ಅಲ್ಲಿ ಹಂಗ್ರಿ ಹಾರ್ಸ್ ಎಂಬ ಅಣೆಕಟ್ಟು ನೋಡಲು ಹೋಗಿದ್ದರು. ಆಗ ಅಲ್ಲಿ 75 ವಯಸ್ಸು ಮೀರಿದ ಸೆಕ್ಯೂರಿಟಿ ಅಧಿಕಾರಿ ಇದ್ದ. ಆತ ಗೊರೂರು ರಾಮಸ್ವಾಮಿ ಅಯ್ಯಂಗಾರರಿಗೆ "ನಿಮ್ಮ ಚೀಫ್ ಇಂಜಿನಿಯರ್ ವಿಶ್ವೇಶ್ವರಯ್ಯನವರು ಇನ್ನೂ ಇದ್ದಾರೆಯೇ" ಎಂದು ಕೇಳಿದ. ಅದಕ್ಕೆ ಅವರು "ಇಲ್ಲ, ಈಚೆಗೆ ತಮ್ಮ 102ನೆಯ ವಯಸ್ಸಿನಲ್ಲಿ ತೀರಿಕೊಂಡರು" ಎಂದರು. ಆಗ ಆ ಅಧಿಕಾರಿ "ಗ್ರಾಂಡ್ ಓಲ್ಡ್ ಮ್ಯಾನ್. ಇಂಜಿನಿಯರಿಂಗ್ ಜಯಂಟ್. ಇಲ್ಲಿಗೆ ಬಂದಿದ್ದರು. ಆಗ ಅಮೆರಿಕಾದ ಚೀಫ್ ಇಂಜಿನಿಯರುಗಳೆಲ್ಲ ಇಲ್ಲಿ ಸೇರಿದ್ದರು. ಅವರು ಅನೇಕ ಗಂಟೆಗಳ ಕಾಲ ಎಲ್ಲವನ್ನೂ ಪರಿಶೀಲಿಸಿ ಅತ್ಯುತ್ತಮ ಸಲಹೆಗಳನ್ನು ಕೊಟ್ಟರು" ಎಂದು ಹೇಳಿದ. ಅವರ ಹೆಸರು ಅಮೆರಿಕಾದಲ್ಲೂ ಪ್ರಸಿದ್ಧವಾಗಿತ್ತು.

ಹುಟ್ಟಿದವರೊಂದು ದಿನ ಸಾಯಲೇಬೇಕು. ವಿಶ್ವೇಶ್ವರಯ್ಯನವರೂ ಇದಕ್ಕೆ ಹೊರತಾಗಿರಲಿಲ್ಲ. ಅವರ 98ನೆಯ ವಯಸ್ಸಿನಲ್ಲಿ ಪ್ರಸಿದ್ಧ ಕಣ್ಣಿನ ವೈದ್ಯರಾದ ಡಾ. ಎಂ. ಸಿ. ಮೋದಿ ಅವರ ಕಣ್ಣು ಪರೀಕ್ಷಿಸಿದರು. ಆ ವಯಸ್ಸಿನಲ್ಲೂ ಅವರು ಕನ್ನಡಕ ಬಳಸದೆ ಓದುತ್ತಿದ್ದರು. ಕಣ್ಣಿನ ಪರೀಕ್ಷೆಯಿಂದ ಅವರಿಗೆ ಸಮೀಪ ದೃಷ್ಟಿ ಮತ್ತು ಪೊರೆ ಬೆಳೆಯುತ್ತಿದ್ದುದು ಕಂಡು ಬಂತು. ಇಷ್ಟು ದೀರ್ಘಕಾಲ ನಿರೋಗಿಯಾಗಿ ಬಾಳುತ್ತಿದ್ದ ಅವರ ದೇಹ ಕ್ಷೀಣಿಸತೊಡಗಿತು. ಗುಟುಕು ನೀರು ಸೇವಿಸುವುದೂ ಕಷ್ಟ ವಾಗುತ್ತಿತ್ತು. ಅವರು ರೋಗ ಪೀಡಿತರಾಗಿ ನರಳುತ್ತಿರಲಿಲ್ಲ. ದೇಹ

ಸವೆದಿತ್ತು. ಮಾಡಬೇಕಾದ್ದು ಇನ್ನೇನೂ ಉಳಿದಿರಲಿಲ್ಲ. ಕಡೆಯ ಉಯಿಲನ್ನೂ ಬರೆದಿಟ್ಟಾಗಿತ್ತು. ತಮ್ಮ ಅಂತ್ಯಕ್ರಿಯೆಗಾಗಿ ಸ್ವಲ್ಪ ಹಣವನ್ನು ಬೇರೆ ತೆಗೆದಿಟ್ಟಿದ್ದರು. ತಮ್ಮ 102ನೆಯ ವಯಸ್ಸಿನಲ್ಲಿ ದೀರ್ಘಕಾಲದ ಸಾರ್ಥಕ ಬಾಳುವೆ ಮುಗಿಸಿ ಇಹಲೋಕ ತ್ಯಜಿಸಿದರು. ಅವರು ದಿವಂಗತರಾದುದು 1962 ಏಪ್ರಿಲ್ 12ರಂದು. ಅವರ ಇಚ್ಛೆಯಂತೆ ಅವರ ಶರೀರವನ್ನು ಮುದ್ದೇನಹಳ್ಳಿಗೆ ತೆಗೆದುಕೊಂಡು ಹೋಗಿ ಸರ್ಕಾರದ ಸಕಲ ಗೌರವಗಳೊಡನೆ ಅಗ್ನಿಗೆ ಅರ್ಪಿಸಲಾಯಿತು.

ಮಾತು ಕೃತಿಗಳಿಂದ ತಮ್ಮ ಬದುಕನ್ನೇ ಆದರ್ಶ ಮಾಡಿದ ವಿಭೂತಿ ಪುರುಷ ಎನಿಸಿಕೊಂಡರು, ವಿಶ್ವೇಶ್ವರಯ್ಯನವರು.

Printed at Impress Offset E-17, Sector 7, NOIDA-201301